ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಭಗವಾನ್ ಮಹಾವೀರ

ಜಗದೀಶ್‌ಚಂದ್ರ ಜೈನ್

ಅನುವಾದ

ಬಿ.ಎ. ಸನದಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-0695-2

ಮೊದಲ ಮುದ್ರಣ 1983 (ಶಕ 1904)
ದ್ವಿತೀಯ ಮುದ್ರಣ 1993 (ಶಕ 1915)

Bhagawan Mahavira (Kannada)
ರೂ. 17.50
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110016
ಇವರಿಂದ ಪ್ರಕಟಿತ

# ಅನುಕ್ರಮಣಿಕೆ


ಪ್ರಸ್ತಾವನೆ vii

ಮಹಾವೀರರ ಕಾಲದ ಶ್ರಮಣ ಪರಂಪರೆಯ ಅನುಯಾಯಿಗಳು ಮತ್ತಿತರ ಧರ್ಮಾಚಾರ್ಯರು 1

ಜೈನಧರ್ಮದ ತೀರ್ಥಂಕರರು 5

ಬಿಹಾರ ಭೂಮಿಯ ಮೇಲೆ ಮಹಾವೀರ 9

ಮಹಾವೀರ ವಾಣಿಯ ಸಂಕಲನ 38

ಶ್ರಮಣ ಸಂಘದ ಧರ್ಮ ಪ್ರಚಾರ 45

ಮಹಾವೀರರ ಉಪದೇಶ 52

ಜೈನ ಸಂಸ್ಕೃತಿಯ ಕಾಣಿಕೆ 59

# ಪ್ರಸ್ತಾವನೆ

ಕ್ರಿ. ಪೂ. ಆರನೆಯ ಶತಮಾನದ ಕಾಲ ಭಾರತದಲ್ಲಷ್ಟೇ ಅಲ್ಲ, ಏಶಿಯಾ ಮಹಾದ್ವೀಪದ ಇತಿಹಾಸದಲ್ಲಿಯೇ ಅತ್ಯಂತ ಮಹತ್ವದ ಕಾಲವೆನ್ನಬೇಕು. ಬೌದ್ಧಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲೊಂದು ಬಗೆಯ ವಿಸ್ಮಯಕಾರೀ ಕೋಲಾಹಲವೆದ್ದ ಕಾಲವದು. ಈ ಮಾನಸಿಕ ಮತ್ತು ಬೌದ್ಧಿಕ ಸಂಘರ್ಷಗಳಿಂದ ಪಾರಾಗಲು ಯಾವ ಕಡೆಗೂ ನಿಚ್ಚಳವಾದ ದಾರಿಯೆಂಬುದಿರಲಿಲ್ಲ. ನಾಲ್ಕೆಸೆಗಳಲ್ಲೂ ಅಂಧವಿಶ್ವಾಸ, ಪರಾವಲಂಬನ, ನಿಷ್ಕ್ರಿಯತೆ, ಸ್ವಾರ್ಥಪರತೆಗಳ ಪೈಪೋಟಿಯೇ ನಡೆದಂತಿತ್ತು. ಇಂಥ ಪರಿಸ್ಥಿತಿಯಲ್ಲಿಯೇ ಗ್ರೀಸ್‌ನಲ್ಲಿ ಸುಕರಾತ, ಪರ್ಶಿಯಾದಲ್ಲಿ ಝುರತುಷ್ಟ್ರ, ಚೀಣಾದಲ್ಲಿ ಕನ್‌ಫ್ಯೂಶಿಯಸ್ ಮತ್ತು ಫಿಲಿಸ್ತೇನದಲ್ಲಿ ಯಹೂದೀ ವಿಚಾರವಂತರು ಜನ್ಮ ತಾಳಿದರು. ಭಾರತದಲ್ಲಿ ಮಹಾವೀರ ಮತ್ತು ಬುದ್ಧರಂಥ ವಿಭೂತಿ ಪುರುಷರು ಜನಿಸಿದರು.

ಮಹಾವೀರರು ಉತ್ತರ ಬಿಹಾರದ ಭೂಮಿಯನ್ನು ತಮ್ಮ ಜನ್ಮದಿಂದ ಪುನೀತಗೊಳಿಸಿದರು. ಜನ ತಮ್ಮ ತಮ್ಮ ಕರ್ತವ್ಯಗಳಿಂದ ವಿಮುಖರಾಗುತ್ತಿದ್ದ ಕಾಲವದು. ತಮ್ಮ ಹಿತವೆಲ್ಲಿದೆ, ಅಹಿತವೆಲ್ಲಿದೆ ಎಂಬುದನ್ನೂ ಅವರು ಅರಿಯದವರಾಗಿದ್ದರು. ಎಲ್ಲೆಡೆಯಲ್ಲಿಯೂ ಮೂಢ ನಂಬಿಕೆಗಳ ಗೂಢ ಕೈವಾಡ. ಜನಕ್ಕೆ ಪುರುಷಾರ್ಥವೇ ಮರೆತುಹೋದಂತಾಗಿತ್ತು. ಸ್ವಾರ್ಥದ ಸಿದ್ಧಿಯೇ ಮಹಾ ಸಿದ್ಧಿಯೆಂಬ ಭ್ರಮೆ ಎಲ್ಲೆಡೆ ವ್ಯಾಪಿಸಿತ್ತು. ಪರಸ್ಪರ ಕಲಹ, ಈರ್ಷ್ಯೆ ಮತ್ತು ದ್ವೇಷಗಳು ಸ್ವಚ್ಛಂದವಾಗಿ ಬೆಳೆಯುತ್ತಲಿದ್ದವು. ಸಾಮಾನ್ಯ ಜನರ ಬಗೆಗೊಂದು ತಾತ್ಸಾರ ಭಾವ, ಮೇಲು-ಕೀಳುಗಳೆಂಬ ತಾರತಮ್ಯ ಭಾವಗಳು ಬೇರೂರಲಾರಂಭಿಸಿದ್ದವು. ಧನ ಮತ್ತು ಅಧಿಕಾರಗಳೇ ಸಂಪನ್ನ ಜೀವನದ ಲಕ್ಷಣಗಳೆನ್ನುವಂತಾಗಿತ್ತು.

ಆಗ, ಮಹಾವೀರರ ಅಂತರಾಳದಲ್ಲಿ ಜನಕಲ್ಯಾಣದ ಭಾವನೆ ಪ್ರಜ್ವಲಿತವಾಯಿತು. ಆದರೆ ಇತರರಿಗಾಗಿ ಏನಾದರೂ ಮಾಡುವ ಮುನ್ನ ತನ್ನ ಯೋಗ್ಯತೆಯನ್ನೇಕೆ ಹೆಚ್ಚಿಸಿಕೊಳ್ಳಬಾರದು? ತನ್ನ ಆಸೆಗಳನ್ನೇ ಮೊದಲು ಜಯಿಸಿ ಪರರ ಹಿತ ಸಾಧಿಸಲು ಹೊರೆಡುವುದು ಲೇಸಲ್ಲವೇ? ಪ್ರಪಂಚದಲ್ಲಿ ಸುಖ ಮತ್ತು ಭೋಗ-ವಿಲಾಸ-ಸಾಧನಗಳು ಪರಿಮಿತ ಪ್ರಮಾಣದಲ್ಲಿವೆ. ಆದುದರಿಂದ ಸ್ವಂತದ ಸುಖ ಮತ್ತು ಭೋಗ-ವಿಲಾಸಗಳ ಸಾಧನಗಳನ್ನು ನಾವು ಇತರರೊಡನೆ ಹಂಚಿಕೊಳ್ಳದಿದ್ದರೆ ಮತ್ತು ಇತರರ ಪಾಲನ್ನೂ ಕಸಿದುಕೊಳ್ಳಬೇಕೆಂಬ ಪ್ರವೃತ್ತಿಯನ್ನು ದೂರ ಮಾಡದಿದ್ದರೆ ಇತರರು ಹೇಗೆ ಸುಖಿಗಳಾದಾರು? ನಾವು ಹೀಗೆ ಮಾಡದಿದ್ದರೆ ಇತರರಿಗೆ ತೊಂದರೆ ಕೊಟ್ಟಂತೆಯೇ ಸರಿ. ಇತರರಿಗೆ ತೊಂದರೆ ಕೊಡುವುದೆಂದರೆ ಹಿಂಸೆ ಎಸಗಿದಂತೆ.

ಮಹಾವೀರರು ದೃಢ ನಿಶ್ಚಯಮಾಡಿ ತಮ್ಮ ಕರ್ತವ್ಯದಲ್ಲಿ ನಿರತರಾದರು. ಎಲ್ಲಕ್ಕೂ ಮೊದಲು ಅವರು ನೀಡಿದ ಪಾಠವೆಂದರೆ-ಸ್ವಾವಲಂಬಿಯಾಗುವುದು, ಪುರುಷಾರ್ಥಿಯಾಗುವುದು. ಒಳ್ಳೆಯದೇ ಆಗಲಿ, ಕೆಟ್ಟದ್ದೇ ಆಗಲಿ, ಕರ್ಮದ ಫಲ ಉಣ್ಣಲೇಬೇಕಾಗುವುದು. ಅದರಿಂದ ಬಿಡುಗಡೆಯೆಂಬುದಿಲ್ಲ. ಮನುಷ್ಯನ ಭಾಗ್ಯವಿಧಾತ ಮನುಷ್ಯನೇ. ತನ್ನ ಇಚ್ಛೆಯಂತೆ ಆತ ತನ್ನ ಜೀವನವನ್ನು ರೂಪಿಸಿಕೊಳ್ಳಬಲ್ಲ; ತನ್ನ ಇಚ್ಛೆಯಂತೆ ನಡೆದುಕೊಳ್ಳಬಲ್ಲ. ಅಂದ ಬಳಿಕ, ಈ ಆತ್ಮವಿಶ್ವಾಸವನ್ನು ಕಳೆದುಕೊಂಡು ಪರಾವಲಂಬಿಗಳಾಗಿ ಕೂಡುವುದರಲ್ಲಿ ಯಾವ ಪುರುಷಾರ್ಥವಿದೆ?

ನಮ್ಮ ಕರ್ಮದ ಫಲ ನಮ್ಮ ಬೆನ್ನು ಬಿಡುವುದಿಲ್ಲವಾದರೆ, ಬೇರೆಯವರಿಗೆ ದುಃಖವನ್ನುಂಟು ಮಾಡುವ ಕರ್ಮಕ್ಕೆ ಕೈ ಹಾಕುವುದಾದರೂ ಏತಕ್ಕೆ? ಪರಧನ, ಪರಸಂಪತ್ತಿಗಳ ಕಡೆಗೆ ಕಣ್ಣು ಹಾಕದೆ, ಇನ್ನೊಬ್ಬರ ಯಾವ ಹಕ್ಕಿನ ಮೇಲೂ ಕೈಹಾಕದೆ, ಸ್ವಾವಲಂಬಿಯಾಗಿರುವವನು ಮಾತ್ರ ತನ್ನ ವಿಚಾರ ಮತ್ತು ಕರ್ಮಗಳಲ್ಲಿ ಸಂಪೂರ್ಣ ಸ್ವತಂತ್ರನಾಗಿರುತ್ತಾನೆ. ಅದಕ್ಕಾಗಿ ತನ್ನನ್ನು ತಾನು ಗೆಲ್ಲವುದು, ತನ್ನ ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟು ಕೊಳ್ಳುವುದು, ತನ್ನ ಶರೀರವನ್ನು ಸವೆಸುವುದೂ ಅವಶ್ಯವಾಗಿದೆ. ಮನುಷ್ಯನ ಆಸೆಯೆಂಬುದು ಆಕಾಶದಂತೆ ಅನಂತವಾಗಿದೆ. ಅವನೆದುರು ಕೈಲಾಸ ಪರ್ವತಕ್ಕಿಂತಲೂ ಹಿರಿದಾದ ಬೆಳ್ಳಿ-ಬಂಗಾರದ ಬೆಟ್ಟಗಳು ಬಂದು ನಿಂತರೂ ಅವನಾಸೆ ತುಂಬಲಾರದು.

ಯಾವೊಂದು ವಸ್ತುವಿನ ಸಮ್ಯಕ್‌ಜ್ಞಾನವಾಗುವುದು ತುಂಬಾ ಮಹತ್ವದ ಮಾತಾಗಿದೆ. ಸಮ್ಯಕ್‌ಜ್ಞಾನ ಸಂಪಾದಿಸಲು ಪೂರ್ವಗ್ರಹ-ಮೊದಲೇ ನಿರ್ಧಾರಗೊಂಡ ಗ್ರಹಿಕೆಗಳಿಂದ ಮುಕ್ತರಾಗಿರುವುದು ಅಗತ್ಯವಾಗಿದೆ. ಯಾವುದೊಂದು ವಿಷಯವನ್ನು ತಿಳಿಸುವವರ ದೃಷ್ಟಿಕೋನವನ್ನು ಯಥಾವತ್ತಾಗಿ ತಿಳಿದುಕೊಂಡರೆ ಮಾತ್ರ ನಮಗೆ ಆ ವಿಷಯದ ಸಮುಚಿತ ಪರಿಜ್ಞಾನವುಂಟಾಗುತ್ತದೆ. ಹೀಗಾಗದೆ ಹೋದಲ್ಲಿ ಅನೇಕ ಸಲ ನಾವು ಗೊಂದಲಕ್ಕೀಡಾಗುತ್ತೇವೆ. ತಪ್ಪು ತಿಳುವಳಿಕೆಯುಂಟಾಗಿ ಮನಸ್ತಾಪವೂ ನಿರ್ಮಾಣಗೊಳ್ಳುತ್ತದೆ. ಈ ಮಾತನ್ನೇ ಅಂತರರಾಷ್ಟ್ರೀಯ ದೃಷ್ಟಿಕೋನದಿಂದ ವಿವೇಚಿಸಿದಾಗ ನಮಗೆ ಕಂಡುಬರುವುದಿಷ್ಟೆ : ಪ್ರತಿಯೊಂದು ರಾಷ್ಟ್ರವೂ ವಿಶ್ವಶಾಂತಿ ಪ್ರಸ್ಥಾಪಿತವಾಗಬೇಕೆಂದೇ ಬಯಸುತ್ತಿರುತ್ತದೆ. ಆದರೂ ಯುದ್ಧಗಳು ನಡದೇ ಇರುತ್ತವೆ. ಯಾಕೆ, ಹೀಗೇಕಾಗಬೇಕು? ಇದಕ್ಕೆ ಕಾರಣ : ಪರಸ್ಪರ ತಪ್ಪು ತಿಳುವಳಿಕೆ; ಸ್ವಾರ್ಥಲೋಲುಪತೆಯ ಅತಿರೇಕ; ತಮ್ಮ ಮಹತ್ವಾಕಾಂಕ್ಷೆಗಳ ಅನಿಯಂತ್ರಿತ ಮೇಲಾಟ.

ಭಗವಾನ ಮಹಾವೀರರ ಜೀವನಚರ್ಯೆಗೆ ಸಂಬಂಧಿಸಿದ ಘಟನೆಗಳ ಸರ್ವಮಾನ್ಯ ವಿವರಗಳಾವವೂ ಜೈನ ಗ್ರಂಥಗಳಲ್ಲಿ ಉಪಲಬ್ಧವಿಲ್ಲದಿರುವುದು ದುರ್ದೈವದ ಸಂಗತಿ. ಆದರೂ ಶ್ವೇತಾಂಬರ ಮತ್ತು ದಿಗಂಬರ ಪಂಥಗಳ ಪ್ರಾಚೀನ ಗ್ರಂಥಗಳಲ್ಲಿ ದೊರೆಯುವಷ್ಟು ಸಂಕ್ಷಿಪ್ತ ಜೀವನ ಚರಿತ್ರೆ ಮತ್ತು ಶಾಸ್ತ್ರಗ್ರಂಥಗಳಲ್ಲಿ ದೊರೆಯುವ ಅವರ ಮಹತ್ವದ ಉಪದೇಶಗಳ ಆಧಾರದಿಂದ ಮಹಾವೀರರ ಜೀವನ ಮತ್ತು ಉಪದೇಶಗಳನ್ನಿಲ್ಲಿ ಪ್ರಸ್ತುತಪಡಿಸುವ ಪ್ರಯತ್ನ ಮಾಡಿದ್ದೇವೆ. ಅವರ ಜೀವನ ಮತ್ತು ಸುದೀರ್ಘ ಅನುಭವಗಳ ಹಿನ್ನಲೆಯಲ್ಲಿ ರೂಪುಗೊಂಡ ಅವರ ಉಪದೇಶ ನಮಗೆ ಮಾರ್ಗದರ್ಶಕವಾಗಬಹುದೆಂಬ ಭರವಸೆ ನನಗಿದೆ.

- ಡಾ. ಜಗದೀಶ್‌ಚಂದ್ರ ಜೈನ್

# ಮಹಾವೀರರ ಕಾಲದ ಶ್ರಮಣ ಪರಂಪರೆಯ ಅನುಯಾಯಿಗಳು ಮತ್ತಿತರ ಧರ್ಮಾಚಾರ್ಯರು

ಜೈನ ಮತ್ತು ಬೌದ್ಧ ಪ್ರಾಚೀನ ಸಾಹಿತ್ಯದಲ್ಲಿ ಶ್ರಮಣ (ಸವಣ) ಪರಿವ್ರಾಜಕ ಮತ್ತು ತಾಪಸ ಪರಂಪರೆಗಳಲ್ಲಿ ವೇದ, ಈಶ್ವರ, ಯಜ್ಞ-ವಿಹಿತ ಹಿಂಸೆ, ವರ್ಣ-ಜಾತಿ ಮತ್ತು ವೈದಿಕ ಆಚಾರ-ವಿಚಾರಗಳನ್ನು ಅಲ್ಲಗಳೆದು, ಕಾಲಕ್ಕೆ ತಕ್ಕಂತೆ ಹೊಸ ಚಿಂತನಕ್ರಿಯೆ ಮುಂದುವರಿಯುವಂತೆ ಮಾಡಿದ ಹಲವೊಂದು ಚಿಂತಕರ ಮತ್ತು ವಿಚಾರವಂತರ ಉದಾಹರಣೆಗಳುಂಟು.

ಬ್ರಾಹ್ಮಣ ಪರಂಪರೆಗಳನ್ನು ವಿರೋಧಿಸಿದ, ಶ್ರಮಣ ಧರ್ಮದ ಅನುಯಾಯಿಗಳಾದ ಆರು ಜನ ಯಶಸ್ವೀ ಧರ್ಮಾಚಾರ್ಯರ ಹೆಸರುಗಳು ಬೌದ್ಧರ ಪ್ರಾಚೀನ ಪಾಲಿ ಗ್ರಂಥಗಳಲ್ಲಿ ವಿಶೇಷ ರೂಪದಲ್ಲಿ ಉಲ್ಲೇಖಿಸಲ್ಪಟ್ಟಿವೆ : ಪೂರಣ ಕಸ್ಸಪ, ಮಂಖಲಿ ಗೋಸಾಲ, ಅಜಿತ ಕೇಸಕಂಬಲ, ಪಕುಧ ಕಚ್ಚಾಯನ, ಸಂಜಯ ಬೇಲಟ್ಠಿಪುತ ಮತ್ತು ನಿಗಂಠ ನಾತಪುತ್ತ (ನಿರ್ಗ್ರಂಥ ಜ್ಞಾತಪುತ್ರ ಮಹಾವೀರ). ಆ ಧಾರ್ಮಿಕ ಮಹಾಧುರೀಣರಿಗೆ ಸಂಘಸ್ವಾಮಿ, ಗಣಾಚಾರ್ಯ, ಜ್ಞಾನಿ, ಯಶಸ್ವಿ, ತೀರ್ಥಂಕರ, ಲೋಕ ಸಮ್ಮಾನಿತ, ಅನುಭವಿಗಳೆಂದೂ ಬಹುಕಾಲದಿಂದ ದೀಕ್ಷಿತರೆಂದೂ ಕರೆಯುವುದು ರೂಢಿ. ಗೌತಮಬುದ್ಧ ಮತ್ತಿತರ ಧರ್ಮನಾಯಕರೆಲ್ಲ ನಿಶ್ಚಿತವಾಗಿಯೂ ಬಹು ಪ್ರಭಾವಶಾಲಿಗಳಾಗಿರಬೇಕು; ಒಂದು ಕಾಲಕ್ಕೆ ಬಿಹಾರದ ಭೂಮಿಯೆಲ್ಲ ಅವರ ಜ್ಞಾನಪ್ರಭೆಯಲ್ಲಿ ಮಿಂದು ಪುನೀತವಾಗಿರಬೇಕು; ಅಲ್ಲಿನ ಜೀವನ ಚೇತರಿಸಿಕೊಂಡಿರಬೇಕು.

ಶ್ರಮಣ ಪರಂಪರೆಯ ಅನುಯಾಯಿಗಳಾದುದರಿಂದ ಈ ಧರ್ಮಾಚಾರ್ಯರು ಸಂಯಮ, ತಪ ಮತ್ತು ತ್ಯಾಗಗಳ ಕುರಿತು ಉಪದೇಶವೀಯುತ್ತ ಮತ್ತು ಧರ್ಮದ ಪ್ರಸಾರ ಮಾಡುತ್ತ ಸಂಚರಿಸುತ್ತಿದ್ದರು. ಒಮ್ಮೆ ರಾಜಗೃಹದಲ್ಲಾದರೆ ಮತ್ತೊಮ್ಮೆ ನಾಲಂದಾದಲ್ಲಿ; ಒಮ್ಮೆ ವೈಶಾಲಿಯಲ್ಲಾದರೆ ಇನ್ನೊಮ್ಮೆ ಮಿಥಿಲಾದಲ್ಲಿ, ಆಗೀಗ ಹಳ್ಳಿ-ಪಟ್ಟಣಗಳಲ್ಲೆಲ್ಲ ಇವರು ತಮ್ಮ ಸಂಘಗಳೊಡನೆ ಸಂಚರಿಸುವುದು ನಿತ್ಯದ ದೃಶ್ಯವಾಗಿತ್ತು. ಈ ಧರ್ಮಾಚಾರ್ಯರ ಆಗಮನವಾರ್ತೆ ತಿಳಿದೊಡನೆ ಅಂಗ-ಮಗಧ ಪ್ರಜೆಗಳಿಗೆಲ್ಲ ಆನಂದವೇ ಆನಂದ. ಎಲ್ಲರೂ ತಮ್ಮ ತಮ್ಮ ಅನುಮಾನ-ಶಂಕೆಗಳೊಡನೆ ಧಾವಿಸಿ ಬರುತ್ತಿದ್ದರು; ಪ್ರಶ್ನೋತ್ತರ ನಡೆದು ಶಂಕೆ ಪರಿಹಾರವಾಗುತ್ತಿತ್ತು. ಕೊನೆಯಲ್ಲಿ ಯಾರಾದರೂ ತಮ್ಮ ಯಕ್ತಿ-ಪ್ರಯುಕ್ತಿಗಳಿಂದ ಅಲ್ಲಿ ನೆರೆದ ಶ್ರೋತೃಗಳ ಮೇಲೆ ಪ್ರಭಾವ ಬೀರಿದುದಾದರೆ, ಇಲ್ಲವೆ ಯಾವುದಾದರೂ ವಿಶೇಷ ಚಮತ್ಕಾರ ಮಾಡಿ ತೋರಿಸಿದುದಾದರೆ ಅಂಥವರಿಗೆ 'ವಿಜಯೀ' ಎಂಬ ಬಿರುದನ್ನು ನೀಡಲಾಗುತ್ತಿತ್ತು. ಜನಸಾಮಾನ್ಯರಲ್ಲಿ ಅವರ ಬಗೆಗೆ ಗೌರವ-ಪ್ರತಿಷ್ಠೆಗಳು ಹೆಚ್ಚುತ್ತಿದ್ದವು. ಅವರ ಗೌರವಾರ್ಥ ಯೋಜನ ಸನ್ಮಾನ ಸಮಾರಂಭಗಳೂ ನಡೆಯುತ್ತಿದ್ದವು.

ದುರ್ಭಾಗ್ಯದಿಂದ ನಿಗಂಠ ನಾತಪುತ್ರ (ಮಹಾವೀರ) ಮತ್ತು ಗೌತಮ ಬುದ್ಧರ ಹೊರತಾಗಿ ಮೇಲೆ ಉಲ್ಲೇಖಿಸಿದ ಯಾರೊಬ್ಬರ ಸಾಹಿತ್ಯವೂ ನಮಗಿಂದು ಉಪಲಬ್ಧವಿಲ್ಲ ಮತ್ತು ಈ ಸಾಹಿತ್ಯದ ಅಭಾವದಿಂದಾಗಿ ಅವರ ಸಿದ್ಧಾಂತಗಳ ಯಥಾರ್ಥ ಜ್ಞಾನದಿಂದ ನಾವು ವಂಚಿತರಾಗಿಯೇ ಉಳಿಯುವಂತಾಗಿದೆ. ಬೌದ್ಧ ಮತ್ತು ಜೈನ ಗ್ರಂಥಗಳಲ್ಲಿ ಅವರ ಅಲ್ಪ-ಸ್ವಲ್ಪ ಪರಿಚಯವಿದೆಯಾದರೂ, ಅಷ್ಟರ ಮೇಲಿಂದಲೇ ಸರ್ವಾಂಶ ನಿಷ್ಕರ್ಷೆಯಾಗಲಾರದು.

ಶ್ವೇತಾಂಬರ ಜೈನ-ಆಗಮಗಳಲ್ಲಿ ಬಂದಿರುವ ವಿಸ್ತೃತ ವಿವರಣೆಯ ಮೇಲಿಂದ ಮಂಖಲೀಪುತ್ರ ಗೋಶಾಲರು ತುಂಬಾ ಪ್ರಭಾವಶಾಲಿ ಧರ್ಮಾಚಾರ್ಯರಾಗಿದ್ದಿರಬಹುದೆಂದು ತಿಳಿಯುತ್ತದೆ. ಅವರು ಆಜೀವಕ ಸಂಪ್ರದಾಯದ ಓರ್ವ ಪ್ರಮುಖ ತೀರ್ಥಂಕರರಾಗಿದ್ದರು. ಶ್ರಾವಸ್ತಿ (ಗೊಂಡಾ ಜಿಲ್ಲೆಯ ಸಹೇತ-ಮಹೇತ) ಅವರ ಅನುಯಾಯಿಗಳ ಕೇಂದ್ರವಾಗಿತ್ತು. ಆಜೀವಕ ಸಂಪ್ರದಾಯದ ಪ್ರಮುಖ ಉಪಾಸಕರು ಹನ್ನೆರಡು ಜನ. ಅವರೆಲ್ಲ ಗೋಶಾಲರನ್ನು ತಮ್ಮ ಅರಿಹಂತ-ದೇವ ಎಂದು ಮನ್ನಿಸುತ್ತಿದ್ದರು. ಅವರೆಲ್ಲ ತಮ್ಮ ತಂದೆ-ತಾಯಿಯರ ಸೇವೆ-ಶುಶ್ರೂಷೆ ಮಾಡುತ್ತಿದ್ದರು; ಐದು ಉದುಂಬರ[1] ಫಲಗಳ ಸೇವನೆ ಮಾಡುತ್ತಿರಲಿಲ್ಲ; ಎತ್ತುಗಳ ಬದಲು ಹೋರಿಗಳನ್ನು ಮೂಗುದಾರ ಹಾಕದೆ ತಮ್ಮ ವ್ಯಾಪಾರ ಚಟುವಟಿಕೆಗಳಿಗೆ ಬಳಸುತ್ತಿದ್ದರು. ಹಾಗೆಯೇ ಹಿಂಸಾರಹಿತ ವ್ಯವಹಾರದಿಂದ ತಮ್ಮ ಉಪಜೀವನ ನಡೆಸುತ್ತಿದ್ದರು. ಗೋಶಾಲರು ನಿಮಿತ್ತಶಾಸ್ತ್ರದ ಪಂಡಿತರಾಗಿದ್ದರು. ಪಾರ್ಶ್ವನಾಥರ ಶಿಷ್ಯರಿಂದ ಗೋಶಾಲರು ಈ ವಿದ್ಯೆಯನ್ನು ಸಂಪಾದಿಸಿದ್ದರು. ದಿಗಂಬರ ಸಂಪ್ರದಾಯದಲ್ಲಿಯೂ ಗೋಶಾಲರು ಪಾರ್ಶ್ವನಾಥರ ಪರಂಪರೆಯ ಅನುಯಾಯಿಗಳೆಂದು ಉಲ್ಲೇಖಿಸಲಾಗಿದೆ. ಶ್ವೇತಾಂಬರ ಆಗಮಗಳ ಪ್ರಕಾರ ಗೋಶಾಲರು ಮಹಾವೀರರ ತಪಸ್ವೀ ಜೀವನಾವಧಿಯಲ್ಲಿ ಅವರ ಶಿಷ್ಯರಾಗಿದ್ದರು. ಆದರೆ ಬರಬರುತ್ತ ಕಾರಣಾಂತರಗಳಿಂದ ಮಹಾವೀರರಿಗೂ ಗೋಶಾಲರಿಗೂ ಭಿನ್ನಾಭಿಪ್ರಾಯವುಂಟಾಗಿ ಅವರಿಬ್ಬರ ದಾರಿ ಕವಲೊಡೆಯಿತು. ಅದಾಗಿ ಹದಿನಾರು ವರ್ಷಗಳ ನಂತರ ಅವರಿಬ್ಬರು ಮತ್ತೆ ಸಂಧಿಸಿದರು. ಗೋಶಾಲರು ತಾವು 'ಜಿನ' ಎಂದು ಘೋಷಿಸಿದರು. ಅವರಿಗೆ ತೇಜೋಲೇಶ್ಯಾ (ಉಗ್ರದೃಷ್ಟಿ) ಸಿದ್ಧಿ ಪ್ರಾಪ್ತವಾಯಿತು. ಗೋಶಾಲರು ತಪಸ್ವಿಗಳೆಂದು ಮನ್ನಿಸಿ ಮಹಾವೀರರು ಅವರ ತೇಜೋಲೇಶ್ಯಾಸಿದ್ಧಿಯ ಪ್ರಶಂಸೆ ಮಾಡಿದರು. ಗೋಶಾಲರು ಮಹಾವೀರರ ಮೇಲೆ ತಮ್ಮ ತೇಜೋ ಲೇಶ್ಯಾಸಿದ್ಧಿಯ ಪ್ರಯೋಗ ಮಾಡಿದರು. ಆದರಿಂದ ಮಹಾವೀರರಿಗೆ ಶಾರೀರಿಕ ಯಾತನೆಯುಂಟಾಯಿತು. ಗೋಶಾಲರ ನಿಧನಾನಂತರವೂ ಮಹಾವೀರರು ಜೀವಿತರಾಗಿದ್ದರು.

ಮಹಾವೀರರಂತೆ ಗೋಶಾಲರೂ ನಗ್ನರಾಗಿರುತ್ತಿದ್ದರು. ಆಜೀವಕ ಮತದ ಸಾಧುಗಳು ನಗ್ನರಾಗಿರಬೇಕು, ಕಠೋರ ತಪಸ್ಸು ಮಾಡಬೇಕು ಮತ್ತು ಸ್ವಂತ ಕೈಗಳಿಂದ ಭಿಕ್ಷಾಗ್ರಹಣ ಮಾಡಬೇಕೆಂದು ಆದೇಶವಿದೆ. ಆಜೀವಕ ಸಾಧುಗಳು ಭೋಜನಕ್ಕಾಗಿ ಯಾರ ಆಮಂತ್ರಣವನ್ನೂ ಸ್ವೀಕರಿಸುವುದಿಲ್ಲ; ಇತರರು ಉದ್ದೇಶಪೂರ್ವಕವಾಗಿ ಸಿದ್ಧಗೊಳಿಸಿದ ಆಹಾರಕ್ಕೆ ಕೈ ಕೈ ಹಚ್ಚುವುದಿಲ್ಲ.

ಗೋಶಾಲರಿಗೆ ಉಣ್ಣೆಯಿಂದ ತಯಾರಿಸಿದ ಕಂಬಳಿಗೆ ಹೋಲಿಸುತ್ತ ಭಗವಾನ್ ಬುದ್ಧರು

---

1. ಪಂಚ ಬಿಲ್ವದಂತೆ ಐದು ವಿವಿಧ ವೃಕ್ಷಗಳ ಹಣ್ಣುಗಳು.

ಗೋಶಾಲರಿಂದ ಹರದಾರಿ ದೂರವಿರುವಂತೆ ತಮ್ಮ ಶಿಷ್ಯರಿಗೆ ಆದೇಶವಿತ್ತಿದ್ದರು. ಬುದ್ಧರ ಹೇಳಿಕೆಯಂತೆ ಗೋಶಾಲರೆಂದರೆ ಓರ್ವ ಮಾಯಾವಿಯಂತಿದ್ದರು; ನಾವಿಕರು ತನ್ನ ಜಾಲ ಬೀಸಿ ಮೀನುಗಳನ್ನು ಹಿಡಿದಂತೆ ಗೋಶಾಲರು ತಮ್ಮ ಯುಕ್ತಿ-ಪ್ರಯುಕ್ತಿಗಳಿಂದ ಜನರನ್ನು ತಮ್ಮ ಮಾಯಾದಿ ಜಾಲದಲ್ಲಿ ಸಿಕ್ಕಿಸಿಕೊಂಡುಬಿಡುತ್ತಿದ್ದರು.

ಇಂಥ ಹೇಳಿಕೆಗಳೆಲ್ಲ ಗೋಶಾಲರ ಪ್ರಭಾವಶಾಲೀ ವ್ಯಕ್ತಿತ್ವವನ್ನೇ ಎತ್ತಿ ತೋರಿಸುತ್ತದೆ. ಮಹಾವೀರ ಮತ್ತು ಗೋಶಾಲರು ಆರು ವರುಷಗಳ ವರೆಗೆ ಸಹ ಸಂಚಾರ ಮಾಡಿದರು. ಈ ಅವಧಿಯಲ್ಲಿ ಅವರಿಬ್ಬರ ನಡುವೆ ನಡೆದ ಸಂಭಾಷಣೆ ಮತ್ತು ಸಾಮೂಹಿಕ ಘಟನೆಗಳ ಉಲ್ಲೇಖಗಳು ಜೈನ ಆಗಮಗಳಲ್ಲಿ ದೊರೆಯುತ್ತದೆ. ಅವುಗಳೂ ಗೋಶಾಲರ ಸ್ವತಂತ್ರ ವ್ಯಕ್ತಿತ್ವದ ಮೇಲೆಯೇ ಬೆಳಕು ಚೆಲ್ಲುತ್ತವೆ. ಸಾಮ್ರಾಟ ಅಶೋಕನ ಶಿಲಾಶಾಸನಗಳಲ್ಲಿ ಅಶೋಕನು ಆಜೀವಕ ಶ್ರಮಣರಿಗೆ ಗುಹಾದಾನ ನೀಡಿದನೆಂಬ ಉಲ್ಲೇಖ ದೊರೆಯುತ್ತದೆ. ಬೌದ್ಧ, ಬ್ರಾಹ್ಮಣ ಮತ್ತು ನಿರ್ಗ್ರಂಥಿಗಳಂತೆಯೇ ಆಜೀವಕರನ್ನೂ ದಕ್ಷತೆಯಿಂದ ನೋಡಿಕೊಳ್ಳಬೇಕೆಂದು ಅಶೋಕನು ತನ್ನ ಧರ್ಮಾಧಿಕಾರಿಗಳಿಗೆಲ್ಲ ಆದೇಶವಿತ್ತಿದ್ದನು.

ಇದಲ್ಲದೆ, ಇನ್ನಿತರ ಸಂಪ್ರದಾಯಗಳ, ಮತ-ಮತಾಂತರಗಳ ಉಲ್ಲೇಖವೂ ಜೈನ ಮತ್ತು ಬೌದ್ಧ ಪ್ರಾಚೀನ ಸೂತ್ರಗಳಲ್ಲಿ ದೊರೆಯುತ್ತದೆ. ಆದರೆ ಅವೆಲ್ಲ ಹೆಸರಿಗೆ ಮಾತ್ರ ಉಳಿದುಕೊಂಡಿವೆ ಅಷ್ಟೆ. ಇದರ ಮೇಲಿಂದ ತಿಳಿದು ಬರುವ ಸಂಗತಿಯೆಂದರೆ - ಭಾರತೀಯ ತತ್ವ ಚಿಂತನದ ಇತಿಹಾಸದಲ್ಲಿ ವೈಚಾರಿಕ ಏರಿಳಿವುಗಳ ದೃಷ್ಟಿಯಿಂದ ಕ್ರಿ.ಪೂ. ಆರನೆಯ ಶತಮಾನವು ತುಂಬಾ ಮಹತ್ವದ ಕಾಲವಾಗಿತ್ತು; ಆ ಅವಧಿಯಲ್ಲಿ ಕೇವಲ ಉಪನಿಷದ್‌ಕಾರರಲ್ಲದೆ, ಮಹಾವೀರ, ಬುದ್ಧ ಮತ್ತಿತರ ಪರಿಚಿತ-ಅಪರಿಚಿತ ಧರ್ಮಾಚಾರ್ಯರನೇಕರೂ ಚಿಂತನಪ್ರಪಂಚದಲ್ಲಿ ಪರಿವರ್ತನೆಯಾಗಬೇಕೆಂದು ಪರಿತಪಿಸುತ್ತಿದ್ದರು.

ಮಹಾವೀರ ಮತ್ತು ಬುದ್ಧ-ಇವರಿಬ್ಬರೂ ಶ್ರಮಣ ಪರಂಪರೆಯ ಅನುಯಾಯಿಗಳಾಗಿದ್ದರು. ಇಬ್ಬರೂ ಸಮಕಾಲೀನರಾಗಿದ್ದರು. ಇಬ್ಬರೂ ಕ್ಷತ್ರಿಯ ಕುಲದಲ್ಲಿ ಜನ್ಮವೆತ್ತಿ ಬಂದಿದ್ದರು. ಮಹಾವೀರರು ಜ್ಞಾತೃ ಪುತ್ರರೆಂದೂ ಬುದ್ಧರೂ ಶಾಕ್ಯಪುತ್ರರೆಂದೂ ಕರೆಯಲ್ಪಡುತ್ತಿದ್ದರು. 'ಬುದ್ಧ' ಮತ್ತು 'ಜಿನ' ಹೆಸರುಗಳಿಂದ ಇಬ್ಬರೂ ಪ್ರಖ್ಯಾತರಾಗಿದ್ದರು. ಕಾಶಿಯಿಂದ ದೂರ ವಿರುವ ಮಗಧ ಪ್ರದೇಶದಲ್ಲಿ ಇಬ್ಬರದೂ ಜನ್ಮವಾಯಿತು. ಈ ಪ್ರದೇಶವೇ ಇಬ್ಬರ ಪ್ರವೃತ್ತಿಗಳಿಗೂ ಜನ್ಮಸ್ಥಾನವೆನಿಸಿತು; ಕೇಂದ್ರವೆನಿಸಿತು. ಸಾಮ್ರಾಟ ಬಿಂಬಸಾರ (ಶ್ರೇಣಿಕ), ಅಜಾತಶತ್ರು (ಕೂಣಿಕ) ಹಾಗೂ ಅಚ್ಛವಿ ಮತ್ತು ಮಲ್ಲ ಮನೆತನಗಳು ಆಗ ರಾಜ್ಯವಾಳುತ್ತಿದ್ದವು. ವಿಶೇಷವೆಂದರೆ ಮಹಾವೀರ-ಬುದ್ಧರಿಬ್ಬರೂ ಒಂದೇ ನಗರದಲ್ಲಿ ಒಂದೇ ಭಾಗದಲ್ಲಿ ವಿಹರಿಸುತ್ತಿದ್ದರು; ಒಮ್ಮೊಮ್ಮೆ ಒಂದೊಂದೇ ಪರಿವಾರದಲ್ಲಿ ಇಬ್ಬರ ಉಪದೇಶವೂ ನಡೆಯುತ್ತಿತ್ತು; ಇಬ್ಬರ ಅನುಯಾಯಿಗಳೂ ಆಗಾಗ ಪರಸ್ಪರ ಕೂಡುತ್ತಿದ್ದರು; ಧಾರ್ಮಿಕ ವಿಷಯಗಳಲ್ಲಿ ಚರ್ಚೆ ಮಾಡುತ್ತಿದ್ದರು; ಇವರ ವಿಚಾರಗಳಿಂದ ಅವರು, ಅವರ ವಿಚಾರಗಳಿಂದ ಇವರು ಪ್ರಭಾವಿತರಾಗಿ 'ಧರ್ಮಾಂತರ' ಹೊಂದುತ್ತಲೂ ಇದ್ದರು. ಆಗ ಧಾರ್ಮಿಕ ಸಂಘರ್ಷವೆಂಬುದಿರಲಿಲ್ಲ. ಅಂತೆಯೇ ಒಂದೇ ಪರಿವಾರದಲ್ಲಿರುವ ಸದಸ್ಯರು ತಮ್ಮ ತಮ್ಮ ಇಚ್ಛಾನುಸಾರ ಜೈನ, ಬೌದ್ಧ ಇತ್ಯಾದಿ ವಿಭಿನ್ನ ಧರ್ಮಗಳನ್ನು ಅನುಸರಿಸುವ ಸ್ವಾತಂತ್ರ್ಯ ಹೊಂದಿದವರಾಗಿದ್ದರು.

ಮಹಾವೀರ ಮತ್ತು ಬುದ್ಧ-ಇಬ್ಬರೂ ತಪಸ್ಸು ಮಾಡಿದವರು. ಇಬ್ಬರೂ ವೇದವೆಂದರೆ ಅಪೌರುಷೇಯ-ಪುರುಷನ ಹೊರತಾಗಿ ಈಶ್ವರನ ಮೂಲಕ ಪ್ರತಿಪಾದಿತವೆಂಬ ವಿಚಾರವನ್ನು ಮನ್ನಿಸಿದವರಲ್ಲ. ವೈದಿಕ ಯಜ್ಞಗಳು ಫಲದಾಯಕವೆಂದು ಭಾವಿಸಿದವರಲ್ಲ. ಕ್ರಿಯೆಯಂತೆ ಜ್ಞಾನವೂ ಮಹತ್ವದ್ದೆಂದು ಭಾವಿಸಿದರು. ಈ ವಿಶ್ವವೆಂದರೆ ಈಶ್ವರನ ಸೃಷ್ಟಿಯೆಂಬ ತಿಳುವಳಿಕೆಯನ್ನು ಇಬ್ಬರೂ ತಿರಸ್ಕರಿಸಿದವರು. ಜಾತಿಗಿಂತಲೂ ಕರ್ಮ ಮುಖ್ಯವಾದದ್ದೆಂಬ ನಂಬಿಕೆಯುಳ್ಳವರು. ಇಬ್ಬರ ದೃಷ್ಟಿಯಲ್ಲೂ ಅಹಿಂಸೆಯೇ ಪರಮಧರ್ಮ. ಇಬ್ಬರೂ ಸಂಘಗಳನ್ನು ಸ್ಥಾಪಿಸಿದ್ದರು. ಇಬ್ಬರೂ ಪಂಡಿತ ಮಾನ್ಯವಾದ ಸಂಸ್ಕೃತ ಭಾಷೆಯನ್ನು ಬಿಟ್ಟು ಮಗಧದ ಜನಸಾಮಾನ್ಯದ ಭಾಷೆಯಾದ ಮಾಗಧಿಯಲ್ಲಿ ತಮ್ಮ ತಮ್ಮ ಉಪದೇಶ ನೀಡಿದವರು. ಇಬ್ಬರೂ ತಮ್ಮ ಧರ್ಮಪ್ರಸಾರಕ್ಕಾಗಿ ಊರೂರು ಅಲೆದರು. ಇಬ್ಬರ ಸಾಧುಗಳೂ ಚಾತುರ್ಮಾಸದಲ್ಲಿ ಸಂಚಾರ ಕೈಕೊಳ್ಳಬಾರದೆಂದು ನಿಷೇಧವಿದೆ. ಜೈನ ಮತ್ತು ಬೌದ್ಧ ಭಿಕ್ಷುಗಳು ಮಗಧರಾಜ್ಯದ ಹೊರಗೂ ಸಂಚರಿಸಿ ತಮ್ಮ ತಮ್ಮ ಧರ್ಮಪ್ರಸಾರ ಕಾರ್ಯ ಮಾಡಿದರು. ಮಹಾವೀರರು ತಮ್ಮ 72ನೆಯ ಮತ್ತು ಬುದ್ಧರು ತಮ್ಮ 80ನೆಯ ವಯಸ್ಸಿನಲ್ಲಿ ನಿರ್ವಾಣ ಹೊಂದಿದರು. ಬುದ್ಧ ಮಹಾವೀರರಿಗಿಂತಲೂ ವೃದ್ಧರಾಗಿದ್ದರೂ, ನಿರ್ವಾಣ ಪ್ರಾಪ್ತವಾದದ್ದು ಮೊದಲು ಬುದ್ಧರಿಗೆ; ನಂತರ ಮಹಾವೀರರಿಗೆ.

# ಜೈನ ಧರ್ಮದ ತೀರ್ಥಂಕರರು

ಜೈನ ಪರಂಪರೆಯಲ್ಲಿ ಜೈನ ಧರ್ಮವೆಂದರೆ ಶಾಶ್ವತ ಧರ್ಮವೆಂದು ಪರಿಭಾವಿಸಲಾಗಿದೆ. ಆದ್ದರಿಂದ ನಡುನಡುವೆ ಈ ಧರ್ಮಕ್ಕೆ ಅಡ್ಡಿ-ಆತಂಕಗಳೊದಗಿ ಬಂದರೂ ಅದೆಂದೂ ನಾಶವಾಗುವದಿಲ್ಲ. ಜೈನ ಧರ್ಮದಲ್ಲಿ 24 ತೀರ್ಥಂಕರರಿಗೆ ಮನ್ನಣೆ ನೀಡಲಾಗಿದೆ. ಆದಿನಾಥರೆಂದೆನಿಸಿದ ಋಷಭ ಅಥವಾ ಋಷಭದೇವ ಅವಸರ್ಪಿಣಿ ಕಾಲದ ಆದಿ-ತೀರ್ಥಂಕರರು. ಅವರು ನೀತಿ-ನಿಯಮಗಳ ಪ್ರಥಮ ಸಂಸ್ಥಾಪಕರೆಂದು ಪರಿಗಣಿಸಲಾಗಿದೆ. ಅಯೋಧ್ಯೆಯ ಇಕ್ಷ್ವಾಕು ವಂಶದಲ್ಲಿ ಇವರ ಜನ್ಮವಾಯಿತು. ಇವರಿಗೆ ಇಬ್ಬರು ರಾಣಿಯರಿದ್ದರು. ಒಬ್ಬಳ ಉದರದಿಂದ ಭರತ ಮತ್ತು ಬ್ರಾಹ್ಮಿಯರು, ಮತ್ತೊಬ್ಬಳ ಉದರದಿಂದ ಬಾಹುಬಲಿ ಮತ್ತು ಸುಂದರಿಯರು ಜನ್ಮ ತಳೆದರು. ರಾಜ್ಯ ಪಟ್ಟಾಭಿಷೇಕದ ತರುವಾಯ ಅವರು ಗಣಗಳ ಸ್ಥಾಪನೆ ಮಾಡಿದರು. ಸ್ತ್ರೀ-ಪುರುಷರಿಬ್ಬರಿಗೂ ವಿವಿಧ ಕಲೆಗಳ ತಿಳುವಳಿಕೆ ನೀಡಿದರು; ಬೆಂಕಿಯ ಮೇಲೆ ಅನ್ನ ಬೇಯಿಸುವುದು, ಪಾತ್ರೆಗಳನ್ನು ತಯಾರಿಸುವುದು; ಬಟ್ಟೆಗಳನ್ನು ನೆಯ್ಯುವುದು-ಇತ್ಯಾದಿ ಕುಶಲ ಕರ್ಮಗಳ ಜ್ಞಾನ ಮಾಡಿಕೊಟ್ಟರು. ಬ್ರಾಹ್ಮಿಗೆ ಅಕ್ಷರಜ್ಞಾನ, ಸುಂದರಿಗೆ ಗಣಿತ, ಭರತನಿಗೆ ಸ್ಥಾಪತ್ಯಕಲೆ ಮತ್ತು ಬಾಹುಬಲಿಗೆ ಚಿತ್ರಕಲೆಯನ್ನು ಕಲಿಸಿಕೊಟ್ಟರು. ಕೊನೆಗೆ, ಭರತನಿಗೆ ರಾಜ್ಯ ಭಾರ ವಹಿಸಿಕೊಟ್ಟು ಶ್ರಮಣ ದೀಕ್ಷೆಯನ್ನು ಸ್ವೀಕರಿಸಿದರು. ತಮ್ಮ ತಪಸ್ವೀ ಜೀವನಾವಧಿಯಲ್ಲಿ ದೂರದೂರದ ದೇಶಗಳ ಸಂಚಾರ ಮಾಡಿದರು. ತದ ನಂತರ, ಕೇವಲ ಜ್ಞಾನಪ್ರಾಪ್ತ ಮಾಡಿಕೊಂಡು ಕೈಲಾಸ ಪರ್ವತದ ಮೇಲೆ ನಿರ್ವಾಣವನ್ನೆದಿದರು.

ಋಷಭದೇವರ ನಂತರ ಇನ್ನುಳಿದ ತೀರ್ಥಂಕರರು ಬರುತ್ತಾರೆ. ಎಲ್ಲ ತೀರ್ಥಂಕರರು ಹುಟ್ಟಿದ್ದು ಕ್ಷತ್ರಿಯ ಕುಲದಲ್ಲಿಯೇ. ಬಹುತೇಕ ತೀರ್ಥಂಕರರು ಇಕ್ಷ್ವಾಕು ವಂಶದಲ್ಲಿ ಜನ್ಮವೆತ್ತಿ ಕೊನೆಗೆ ಸಮ್ಮೆದ ಶಿಖರದಲ್ಲಿ ನಿರ್ವಾಣ ಹೊಂದಿದರು. ಈ ತೀರ್ಥಂಕರರ ಗರ್ಭಾವಸ್ಥೆ ಜನ್ಮ ತಪ, ಜ್ಞಾನ ಮತ್ತು ಮೋಕ್ಷ ಈ ಐದೂ ಕಲ್ಯಾಣಾವಸ್ಥೆಗಳು ಒಂದೇ ಬಗೆಯವಾಗಿದ್ದವೆಂಬ ವರ್ಣನೆ ಜೈನ ಗ್ರಂಥಗಳಲ್ಲಿ ದೊರೆಯುತ್ತದೆ. ಮೊದಲಿನ 22 ತೀರ್ಥಂಕರರ ಐತಿಹಾಸಿಕ ಪ್ರಮಾಣಗಳು ಈ ವರೆಗೂ ದೊರೆತಿಲ್ಲ. ಅವರ ಜೀವನ ಕಾಲಾವಧಿ, ತೀರ್ಥಂಕರರ ಜೀವನಗಳ ನಡುವಿನ ಅಂತರ ಇತ್ಯಾದಿಗಳ ಬಗ್ಗೆ ವಿಚಾರ ಮಾಡಿದರೆ ಅವರ ಪರಂಪರಾಗತ ಪೌರಾಣಿಕತೆಗೇ ಸಮರ್ಥನೆ ಸಿಗುತ್ತದೆ.

ನೇಮಿ ಅಥವಾ ಅರಿಷ್ಟನೇಮಿ ಜೈನ ಧರ್ಮದ 22ನೆಯ ತೀರ್ಥಂಕರರು. ಇವರು ಯಾದವಕ್ಷತ್ರಿಯರೆಂದೂ ವಾಸುದೇವ ಕೃಷ್ಣನ ಕಕ್ಕನ ಮಗನೆಂದೂ ಜೈನ ಪರಂಪರೆಯ ನಂಬಿಕೆ. ಅರಿಷ್ಟನೇಮಿಯ ಜನ್ಮ ಶೌರ್ಯಪುರ ಆಗ್ರಾ ಜಿಲ್ಲೆಯ ಸೂರಜಪುರದಲ್ಲಿ, ಮಹಾರಾಜ ಸಮುದ್ರವಿಜಯನ ಮಹಾರಾಣಿ ಶಿವಾಳ ಉದರದಿಂದಾಯಿತು. ಉಗ್ರಸೇನ ದೊರೆಯ ರಾಜಕುಮಾರಿ ರಾಜೀ ಮತಿಯೊಡನೆ ನೇಮಿಯ ವಿವಾಹ ಮಾಡಬೇಕೆಂದು ನಿಶ್ಚಯವೂ

ಆಗಿತ್ತು. ಮದುವೆಯ ದಿಬ್ಬಣದೊಡನೆ ಹೊರಟು ಅವರು ವಧುವಿನ ಅರಮನೆಯ ಹತ್ತಿರ ಹತ್ತಿರ ಬಂದಾಗ ಪಶುಗಳ ಚೀತ್ಕಾರವೊಂದು ಕಿವಿಗೆ ಬಿತ್ತು. ದಿಬ್ಬಣದ ಜನರ ಭೋಜನಕ್ಕಾಗಿ ಈ ಪಶುಬಲಿ ನಡೆದಿತ್ತೆಂದು ತಿಳಿಯಲೂ ತಡವಾಗಲಿಲ್ಲ. ತಕ್ಷಣ ಅವರಿಗೆ ಈ ಸಂಸಾರದ ಬಗ್ಗೆ ವೈರಾಗ್ಯವುಂಟಾಗಿ ಅವರು ಶ್ರಮಣದೀಕ್ಷೆ ಸ್ವೀಕರಿಸಿದರು. ಕೊನೆಗೆ ಅವರು ನಿರ್ವಾಣ ಹೊಂದಿದ್ದು ಗಿರನಾರ್ ಪರ್ವತದ ಮೇಲೆ.

## ಪಾರ್ಶ್ವನಾಥರ ಐತಿಹಾಸಿಕತೆ

ಪಾರ್ಶ್ವನಾಥರು ಜೈನಧರ್ಮದ 23ನೆಯ ತೀರ್ಥಂಕರರು. ಜೈನಧರ್ಮದ ಕೊನೆಯ ತೀರ್ಥಂಕರರೆನಿಸಿದ ಭಗವಾನ್ ಮಹಾವೀರರಿಗಿಂತ 250 ವರ್ಷ ಮೊದಲು ಕ್ರಿ.ಪೂ. 8ನೆಯ ಶತಮಾನದಲ್ಲಿ ವಾರಣಾಸಿಯಲ್ಲಿ ಇವರ ಜನ್ಮವಾಯಿತು. ಇಕ್ಷ್ವಾಕು ವಂಶದ ಅಶ್ವಸೇನ ದೊರೆ ಇವರ ತಂದೆ; ರಾಣಿ ವಾಮಾದೇವಿ ಇವರ ತಾಯಿ. ಮೂವತ್ತು ವರ್ಷಗಳ ಗೃಹಸ್ಥಾಶ್ರಮ, ತರುವಾಯದ 70 ವರ್ಷಗಳ ಸಾಧುಜೀವನದಲ್ಲಿ ಘೋರ ತಪಸ್ಸು ಮಾಡಿ ಸಮ್ಮೇದ್ ಶಿಖರದಲ್ಲಿ ನಿರ್ವಾಣಸ್ಥಿತಿಗೇರಿದರು. ಅಹಿಚ್ಛತ್ರಾ, ಹಸ್ತಿನಾಪುರ, ಶ್ರಾವಸ್ತಿ, ಸಾಕೇತ, ಕೌಶಾಂಬಿ ಮುಂತಾದ ನಗರಗಳಲ್ಲಿ ಸಂಚರಿಸಿದರು ಮತ್ತು ಪಶ್ಚಿಮ ಬಂಗಾಳದ ಜನಸಮುದಾಯದಲ್ಲಿ ಧರ್ಮಪ್ರಚಾರ ಮಾಡಿದರು. ಪ್ರಾಚೀನ ಜೈನ ಆಗಮಗಳಲ್ಲಿ ಭಗವಾನ್ ಪಾರ್ಶ್ವನಾಥರಿಗೆ ಪುರುಷರಲ್ಲಿ ಶ್ರೇಷ್ಠರೆಂದೂ, ಲೋಕಪೂಜಿತರೆಂದೂ, ಸಂಬುದ್ಧ, ಸರ್ವಜ್ಞ, ಧರ್ಮ ತೀರ್ಥಂಕರರೆಂದೂ ಜಿನ ಎಂದೂ ಹಲವು ಬಗೆಯಾಗಿ ಸಂಬೋಧಿಸಲಾಗಿದೆ.

ತಮ್ಮ ಧರ್ಮ ಸಂಘಟನೆಯ ಅನುಕೂಲತೆಗಾಗಿ ಪಾರ್ಶ್ವನಾಥರು ನಾಲ್ಕು ವಿಂಗಡಣೆಗಳನ್ನು ಮಾಡಿಕೊಂಡಿದ್ದರು-ಶ್ರಮಣ, ಶ್ರಮಣಿ, ಶ್ರಾವಕ ಮತ್ತು ಶ್ರಾವಿಕಾ ಸಂಘಗಳ ಸಂರಕ್ಷಣೆಗಾಗಿ ಅವರು ಗಣಧರ-ಪ್ರಮುಖ ಶಿಷ್ಯರನ್ನು ನಿಯೋಜಿಸಿದರು. ಪುಷ್ಪಚೂಲಾ ಅವರ ಸಾಧ್ವೀ-ಸಂಘದ ಪ್ರಮುಖ ಗಣ ಧಾರಣಿಯಾಗಿದ್ದಳು. ಪಾರ್ಶ್ವನಾಥರ ಅನೇಕ ಶಿಷ್ಯರ ಉಲ್ಲೇಖ ಜೈನ-ಆಗಮಗಳಲ್ಲಿ ಸಿಗುತ್ತದೆ. ಅವರು ಮಹಾವೀರರ ತಪಸ್ವೀ ಜೀವನಾವಧಿಯಲ್ಲಿ ಬಿಹಾರ ಮತ್ತು ನೆರೆಹೊರೆಯ ಪ್ರದೇಶಗಳಲ್ಲಿ ಸಂಚರಿಸುತ್ತಿದ್ದರೆಂದು ತಿಳಿಯುತ್ತದೆ. ಪಾರ್ಶ್ವನಾಥರ ಶಿಷ್ಯರು ನಿಮಿತ್ತಶಾಸ್ತ್ರದಲ್ಲಿ ನಿಷ್ಣಾತರಿದ್ದರು. ತುಂಗಿಯಾ (ಬಿಹಾರ ಶರೀಫದ ಬಳಿಗಿರುವ ತುಂಗಿ ಗ್ರಾಮದಲ್ಲಿ ಅವರ ಕೇಂದ್ರವಿದ್ದು ಅವರು ತಮ್ಮ ಸಂಘಗಳೊಡನೆ ಅಲ್ಲಿ ಕೂಡುತ್ತಿದ್ದರು. ವಾಣಿಜ್ಯಗ್ರಾಮ (ಬಸಾಡದ ಬಳಿಗಿರುವ ಬನಿಯಾ ಗ್ರಾಮದಲ್ಲಿ ಭಗವಾನ್ ಮಹಾವೀರ ಮತ್ತು ಪಾರ್ಶ್ವನಾಥರ ಶಿಷ್ಯ ಶ್ರಮಣ ಗಾಂಗೇಯನ ನಡುವೆ ನಡೆದ ಸಂವಾದದ ಉಲ್ಲೇಖವು ಭಗವತೀ ಸೂತ್ರದಲ್ಲಿ (9-32) ದೊರೆಯುತ್ತದೆ. ಗಾಂಗೇಯನ ಶಂಕಾ-ಸಮಾಧಾನಗೈಯುತ್ತ ಭಗವಾನ್ ಮಹಾವೀರರು ಪಾರ್ಶ್ವನಾಥರಿಗೆ ಪುರುಷರಲ್ಲಿ ಶ್ರೇಷ್ಠರೆಂದು ಬಣ್ಣಿಸಿ ಅವರ ಬಗೆಗೆ ತಮ್ಮಲ್ಲಿದ್ದ ಗೌರವವನ್ನು ಸೂಚಿಸಿದರು. ಕೊನೆಗೆ ಪಾರ್ಶ್ವನಾಥರು ಪ್ರತಿಪಾದಿಸಿದ ಚಾತುರ್ಯಾಮ-ಅಹಿಂಸಾಧರ್ಮ, ಸತ್ಯ, ಅಚೌರ್ಯ ಮತ್ತು ಅಪರಿಗ್ರಹಗಳ ಬದಲಾಗಿ ಮಹಾವೀರರು ಪ್ರತಿಪಾದಿಸಿದ ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳ ಪಂಚಮಹಾವ್ರತಗಳನ್ನು ಅಂಗೀಕರಿಸಿದರು.

ಕುಮಾರ ಶ್ರಮಣ ಕೇಶಿ ಪಾರ್ಶ್ವನಾಥರ ಮತ್ತೊಬ್ಬ ಶಿಷ್ಯ ಈತ ಪ್ರಾಚೀನ ಗ್ರಂಥಗಳಲ್ಲಿ ಪಾರಂಗತ; ಅಂತೆಯೇ ಶ್ರಮಣ-ಸಂಘಗಳಲ್ಲಿ ಪ್ರತಿಷ್ಠಿತ. ಒಂದು ಸಲ ತನ್ನ 500 ಸಾಧುಗಳ ಸಂಘ-ಸಮೇತನಾಗಿ ಶ್ರಾವಸ್ತಿಗೆ ಹೋದ. ಅಲ್ಲಿ ಭಗವಾನ್ ಮಹಾವೀರರ ಗಣಧರ ಗೌತಮ ಇಂದ್ರ ಭೂತಿಯ ಜೊತೆಗೆ ನಡೆದ ಮಹತ್ವಪೂರ್ಣ ಚರ್ಚಾಗೋಷ್ಠಿಯ ವಿಷಯ ಉತ್ತರಾಧ್ಯಯನ (23) ದಲ್ಲಿ ನಮೂದಿಸಲ್ಪಟ್ಟಿದೆ :

"ಪಾರ್ಶ್ವನಾಥರು ನಾಲ್ಕು ಯಾಮಗಳ ಮತ್ತು ಮಹಾವೀರರು ಪಂಚ ಮಹಾವ್ರತಗಳ ಉಪದೇಶ ನೀಡಿದ್ದುಂಟು. ಅದೇ ಪ್ರಕಾರ, ಪಾರ್ಶ್ವನಾಥರು ಸಚೇಲಧರ್ಮ-ವಸ್ತ್ರಸಹಿತ ಮುನಿಧರ್ಮ ಮತ್ತು ಮಹಾವೀರರು ಅಚೇಲಧರ್ಮ-ವಸ್ತ್ರರಹಿತ ಮುನಿಧರ್ಮವನ್ನು ಪ್ರತಿಪಾದಿಸಿದ್ದಾರೆ. ಈ ಮತಭೇದದ ಕಾರಣವೇನಿರಬಹುದು?" ಎಂದು ಕೇಶಿ ಗೌತಮ ಇಂದ್ರಭೂತಿಯನ್ನು ಕೇಳಿದ.

ಇಂದ್ರ ಭೂತಿ ಉತ್ತರವಿತ್ತ :

"ವಾಸ್ತವಿಕವಾಗಿ ನಾಲ್ಕು ಯಾಮ ಮತ್ತು ಪಂಚಮಹಾವ್ರತಗಳಲ್ಲಿ ವಿಶೇಷವಾದ ಅಂತರವೇನಿಲ್ಲ. ಶಿಷ್ಯರ ಭಿನ್ನ ಭಿನ್ನ ರುಚಿಯನ್ನನುಸರಿಸಿ ಈ ಉಪದೇಶ ನೀಡಲಾಗಿದೆ. ತಮ್ಮ ತಮ್ಮ ರುಚಿಗೆ ತಕ್ಕ ಹಾಗೆ ಈ ತತ್ವಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಭಗವಾನ್ ಪಾರ್ಶ್ವನಾಥ ಮತ್ತು ಭಗವಾನ್ ಮಹಾವೀರ ಇಬ್ಬರೂ ಮಹಾತಪಸ್ವಿಗಳು. ಇಬ್ಬರ ಗುರಿಯೂ ಒಂದೆ. ಇಬ್ಬರೂ ಜ್ಞಾನ, ದರ್ಶನ ಮತ್ತು ಚಾರಿತ್ರ್ಯಗಳ ಮೂಲಕ ಮೋಕ್ಷಸಿದ್ಧಿಯಾಗುವುದೆಂದು ನಂಬಿದವರು. ಇನ್ನು ವಸ್ತ್ರಧಾರಣದ ಬಗ್ಗೆ ವಿಚಾರಿಸುವುದಾದರೆ, ಈ ಬಾಹ್ಯವೇಷವೆಂಬುದೊಂದು ಸಾಧನ ಮಾತ್ರ. ಚಿತ್ತಶುದ್ಧಿಯೇ ಅತ್ಯಂತ ಮಹತ್ವದ್ದು. ಚಿತ್ತಶುದ್ಧಿಯಿಂದಲೇ ನಿಜವಾದ ಸಿದ್ಧಿ.

ಇಂದ್ರಭೂತಿ ನೀಡಿದ ಈ ವಿವರಣೆ ಕೇಳಿ ಕೇಶಿಗೆ ಪರಮ ಸಂತೋಷವಾಗಿ ಆತನೂ ಭಗವಾನ್ ಮಹಾವೀರರು ಪ್ರತಿಪಾದಿಸಿದ ಪಂಚಮಹಾವ್ರತಗಳನ್ನು ಸ್ವೀಕರಿಸಿದ. ಪಾರ್ಶ್ವನಾಥ ಮತ್ತು ಮಹಾವೀರರ ಸಿದ್ಧಾಂತಗಳ ಸಮನ್ವಯಕಾರೀ ಉತ್ತರಾಧ್ಯಯನ ಸೂತ್ರದ ಈ ಉಲ್ಲೇಖ ಅತ್ಯಂತ ಮಹತ್ವದ್ದಾಗಿದೆ. ಇದರಿಂದ ಮೂಲ ಸಿದ್ಧಾಂತಗಳ ಸಾರಸಂರಕ್ಷಣೆ ಮಾಡಿಕೊಂಡೂ ಕಾಲಕ್ಕೆ ತಕ್ಕಂತೆ ಅವುಗಳಲ್ಲಿ ವ್ಯಾವಹಾರಿಕ ಪರಿವರ್ತನೆ ಮಾಡಿ ಕೊಳ್ಳಬಹುದೆಂಬ ಸಂಗತಿ ವಿದಿತವಾಗುತ್ತದೆ.

ಪಾರ್ಶ್ವನಾಥರು ತಮ್ಮ ಸಂಘದಲ್ಲಿ ಕಟ್ಟುನಿಟ್ಟಾದ ಶಿಸ್ತಿಗೆ ತುಂಬಾ ಮಹತ್ವವಿತ್ತಿದ್ದರು. ನಿರ್ಗ್ರಂಥ ಧರ್ಮದಲ್ಲಿ ಹೇಳಿದಂತೆ ತಪ-ಸಂಯಮಗಳ ಪಾಲನೆಗೈಯುವುದು ಅಷ್ಟು ಸುಲಭವಲ್ಲ. ಅನೇಕ ಶ್ರಮಣರು ಕಠಿಣ ತಪಸ್ಸಿಗೆ ಹೆದರಿ, ನಡುವೆಯೇ ಸಾಧು-ಜೀವನಕ್ಕೆ ಶರಣುಹೊಡೆದು ಪರಿವ್ರಾಜಕ ದೀಕ್ಷೆ ಹೊಂದಿದ್ದೂ ಉಂಟು; ನೇರವಾಗಿ ಗೃಹಸ್ಥಾಶ್ರಮಜೀವನಕ್ಕೆ ಮರಳಿದ್ದೂ ಉಂಟು-ಪಾರ್ಶ್ವನಾಥರಿಗೆ ಸ್ಥವಿರ ಮುನಿಚಂದ್ರ ಎಂಬ ಮತ್ತೊಬ್ಬ ಶಿಷ್ಯರಿದ್ದರು. ತಮ್ಮ ಶಿಷ್ಯಮಂಡಲಿಯೊಡನೆ ಮತ್ತೊಬ್ಬ ಶಿಷ್ಯರಿದ್ದರು. ತಮ್ಮ ಶಿಷ್ಯಮಂಡಲಿಯೊಡನೆ ಅವರೊಮ್ಮೆ ಒಂದು ಹಳ್ಳಿಯ ಕುಂಬಾರ ಶಾಲೆಯಲ್ಲಿ ತಂಗಿದ್ದರು. ಆಗ ಮಂಖಲಿ ಗೋಶಾಲರು ಭಗವಾನ್ ಮಹಾವೀರರೊಡನೆ ಸಂಚಾರದಲ್ಲಿದ್ದರು. ಸ್ಥವಿರ ಮುನಿಚಂದ್ರ ಮತ್ತು ಅವರ ಶಿಷ್ಯಸಮೂಹವನ್ನು ಪರಿಗ್ರಹಸಮೇತ ಕಂಡು ಗೋಶಾಲರು ಮಹಾವೀರರನ್ನು ಕುರಿತು ಕೇಳಿದರು-'ಪರಿಗ್ರಹಿಗಳಾದ ಈ ಸಾಧುಗಳನ್ನು ಶ್ರಮಣ ನಿರ್ಗ್ರಂಥೀ ಅನುಯಾಯಿಗಳೆಂದು ಮನ್ನಿಸಬಹುದೇ?' ಮಹಾವೀರರೆಂದರು

- ಈ ಸಾಧುಗಳು ಪಾರ್ಶ್ವನಾಥರ ಪರಂಪರೆಯ ಅನುಯಾಯಿಗಳು. ಆದ್ದರಿಂದ ಇವರಿಗೆ ಯಾರೇನೂ ಮಾಡಲಾರರು. ಈ ಸಾಧುಗಳು ಪ್ರಾರಂಭಿಕ ಹಿಂಸೆಯಿಂದ ಮುಕ್ತರಲ್ಲ, ವಿವಸ್ತ್ರರಲ್ಲ. ಆದರೂ ಮರಣಾನಂತರ ಜಿನಕಲ್ಪ (ಜಿನ ಭಗವಾನನಂತೆ ನಗ್ನ ಸ್ಥಿತಿ) ಹೊಂದುತ್ತಾರೆ. ಪಾರ್ಶ್ವನಾಥರ ಶ್ರಮಣ ಪರಂಪರೆಯಲ್ಲಿ ಸ್ತ್ರೀಯರೂ ದೀಕ್ಷಿತರಾಗಬಹುದು.

ಪಾರ್ಶ್ವನಾಥ ಮತ್ತು ಅವರ ಶಿಷ್ಯರು ಬಿಹಾರ ಮತ್ತು ಉತ್ತರಪ್ರದೇಶದ ಪೂರ್ವಭಾಗದಲ್ಲಿ ಸಂಚರಿಸಿದ್ದರು. ಅವರ ನಿರ್ವಾಣಭೂಮಿಯಾದ ಸಮೆದ್ ಶಿಖರದ ಆಸು-ಪಾಸಿನಲ್ಲಿ-ಪಶ್ಚಿಮ ಬಂಗಾಳದಲ್ಲಿ-ಪಾರ್ಶ್ವನಾಥರಿಂದ ಪ್ರತಿ ಪಾದನೆಗೊಂಡ ನಿರ್ಗ್ರಂಥ ಧರ್ಮದ ಚಿಹ್ನೆಗಳು ದೊರೆಯುತ್ತವೆ. ಬಂಗಾಳದ ಮಾನಭೂಮ, ಸಿಂಹಭೂಮ, ಲೋಹರಡಗ್ಗಾ ಮುಂತಾದ ಸ್ಥಳಗಳಲ್ಲಿರುವ ಸರಾಕ (ಜೈನ ಶ್ರಾವಕ) ಜಾತಿಯವರು ಇಂದಿಗೂ ಪಾರ್ಶ್ವನಾಥ-ಉಪಾಸಕರಾಗಿದ್ದಾರೆ. ಈ ಜನರು ನೀರು ಸೋಸಿ ಕುಡಿಯುತ್ತಾರೆ; ಯಾವ ಜೀವ ಹಾನಿಯಾಗಬಾರದೆಂದು ಸೂರ್ಯಾಸ್ತದ ಮೊದಲೇ ಊಟ ಮುಗಿಸುತ್ತಾರೆ. ಬಂಗಾಳದ ವೀರಭೂಮ ಮತ್ತು ಬಾಂಕುಡಾ ಮುಂತಾದ ಜಿಲ್ಲೆಗಳಲ್ಲಿ ಆಷಾಢ, ಶ್ರಾವಣ, ಭಾದ್ರಪದ, ಆಶ್ವೀನ-ಈ ನಾಲ್ಕು ತಿಂಗಳುಗಳಲ್ಲಿ, ಮುಖ್ಯವಾಗಿ ಶ್ರಾವಣ ಮತ್ತು ಭಾದ್ರಪದ ಮಾಸಗಳಲ್ಲಿ ಮನಸಾ ಎಂಬ ಹೆಸರಿನ ಸರ್ಪದೇವತೆಯ ಪೂಜೆ ಮಾಡುವ ಜಾತಿಯೊಂದಿದೆ. ಬಹುಶಃ ಭಗವಾನ್ ಪಾರ್ಶ್ವನಾಥರ ಶಿರೋಭೂಷಣವಾದ ನಾಗರಾಜ ರೂಪದ ಧರಣೇಂದ್ರನಿಗೂ ಈ ಸರ್ಪಪೂಜೆಗೂ ಸಂಬಂಧವಿದ್ದಿರಬಹುದು. ಬಂಗಾಳದಲ್ಲಿರುವ ಸಂಥಾಲ ಜಾತಿಯ ಜನರು ಪಾರ್ಶ್ವನಾಥರ ನಿರ್ವಾಣಭೂಮಿ ಯಾದ ಸಮ್ಮೆದ್ ಶಿಖರಕ್ಕೆ ಎಮ್ಮೆಗಳ ಬಲಿ ಕೊಡುತ್ತಾರೆ. ಬಂಗಾಳದ ಅಜಿಮಗಂಜ, ದೇವುಲಭೀರಾ (ಬಾಂಕುಡಾ ಜಿಲ್ಲೆ), ಕಾಂಟಾ-ಬೆನಿಯಾ (24 ಪರಗಣಾ ಜಿಲ್ಲೆ), ಸುಯಿಸಾ ಹಾಗೂ ರಾಂಚಿ ಜಿಲ್ಲೆಯ ಅಗಸಿಯಾ ಮುಂತಾದ ಸ್ಥಾನಗಳ ನೆಲದಗೆತದಲ್ಲಿ ಪಾರ್ಶ್ವನಾಥ ಪ್ರತಿಮೆಗಳು ದೊರೆತಿವೆ. ಈ ಸಂಗತಿಗಳಿಂದ ಈ ಪ್ರದೇಶದಲ್ಲಿ ಪಾರ್ಶ್ವನಾಥರ ಲೋಕಪ್ರಿಯತೆ ಅದೆಷ್ಟು ಗಾಢವಾಗಿತ್ತೆಂದು ವಿದಿತವಾಗುತ್ತದೆ. ಸಂಶೋಧನೆ ಮಾಡಿದರೆ ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಐತಿಹಾಸಿಕ ಸಾಮಗ್ರಿ ಬೆಳಕಿಗೆ ಬರುವ ಸಂಭವವುಂಟು.

# ಬಿಹಾರ ಭೂಮಿಯ ಮೇಲೆ ಮಹಾವೀರ

## (ಅ) ವರ್ಧಮಾನನ ಜನ್ಮಭೂಮಿ ವೈಶಾಲಿ

ಪ್ರಾಕೃತಿಕ ಸೌಂದರ್ಯದ ಬೀಡು, ವಿದೇಹ ರಾಜ್ಯದ ರಾಜಧಾನಿ ವೈಶಾಲಿ (ಆಧುನಿಕ ವಸಾಡ) ಮಹಾವೀರರ ಜನ್ಮಭೂಮಿ. ವಜ್ಜೀ ಪ್ರಜಾತಂತ್ರದ ಪ್ರಮುಖ ನಗರವಾದ ವೈಶಾಲಿಯಲ್ಲಿ ಲಿಚ್ಛವೀ ಜನತೆ ನಾಗರಿಕರ ಮೂಲಕ ಆರಿಸಿದ ಪ್ರತಿನಿಧಿಗಳ ಆಡಳಿತ (ಗಣತಂತ್ರ ಪದ್ಧತಿ) ನಡೆಸುತ್ತಿದ್ದರು. ತಮ್ಮ ಸಂಘಟನೆ ಮತ್ತು ಶಿಸ್ತಿಗಾಗಿ ಈ ಜನ ಪ್ರಖ್ಯಾತರಾದವರು. ವೈಶಾಲಿಯಲ್ಲಿ ಗಂಡಕೀ ನದಿ (ಗಂಡಕ) ಹರಿಯುತ್ತಿತ್ತು. ನದಿಯ ದಂಡೆಯ ಮೇಲೆ ಕುಂಡಗ್ರಾಮ ಅಥವಾ ಕುಂಡಪುರವೆಂಬುದೊಂದು ಉಪನಗರ (ಆಧುನಿಕ ಬಾಸುಕುಂಡ) ಈ ಕುಂಡಗ್ರಾಮದಲ್ಲಿ ಎರಡು ಭಾಗಗಳಿದ್ದವು : ಕ್ಷತ್ರಿಯ ಕುಂಡಗ್ರಾಮ ಮತ್ತು ಬ್ರಾಹ್ಮಣ ಕುಂಡಗ್ರಾಮ. ಹೆಸರೇ ಸೂಚಿಸುವಂತೆ ಕ್ಷತ್ರಿಯ ಕುಂಡಗ್ರಾಮದಲ್ಲಿ ಕ್ಷತ್ರಿಯರು, ಬ್ರಾಹ್ಮಣ ಕುಂಡಗ್ರಾಮದಲ್ಲಿ ಬ್ರಾಹ್ಮಣರು ನೆಲಸಿದ್ದರು. ಮಹಾವೀರರ ಜನ್ಮವಾದದ್ದು ಕ್ಷತ್ರಿಯ ಕುಂಡಗ್ರಾಮದಲ್ಲಿ. ವಜ್ಜೀ ದೇಶದ (ಚಂಪಾರಣ, ಮುಜಪ್ಫರಪುರ, ದರಭಂಗಾ ಮತ್ತು ಛಪರಾ ಜಿಲ್ಲೆಗಳ ಪ್ರದೇಶ) ಶಾಸನ ನಡೆಸುವ ವಜ್ಜೀ ಸಂಘದಲ್ಲಿ ವಿದೇಹ, ಲಿಚ್ಛವೀ, ಜ್ಞಾತೃ, ವಜ್ಜೀ, ಉಗ್ರ, ಭೋಗ, ಈಕ್ಷ್ವಾಕು ಮತ್ತು ಕೌರವರೆಂಬ ಎಂಟು ಕುಲಗಳ ಸಮಾವೇಶವಿದ್ದು, ಅವುಗಳಲ್ಲಿಯ ಜ್ಞಾತೃ ಕುಲದಲ್ಲಿ ಮಹಾವೀರರ ಜನ್ಮವಾಗಿತ್ತು. ಈ ಕುಂಡಗ್ರಾಮದಲ್ಲಿ ಎಂದಿನಿಂದಲೋ ಉತ್ತದೇ ಬಿತ್ತದೇ ಹಾಳುಭೂಮಿಯಂತೆ ಉಳಿದುಕೊಂಡಿದ್ದ ಸುಮಾರು ಎರಡು ಎಕರೆಗಳಷ್ಟು ಭೂಭಾಗದ ಮೇಲೆ ಈ ಮಹಾವೀರನೆಂಬ ಪವಿತ್ರ ಜೀವಪುಷ್ಪ ಅರಳಿತು. ಇಂದಿಗೂ ಇಲ್ಲಿಯ ಗ್ರಾಮನಿವಾಸಿಗಳು ಮಹಾವೀರರ ಹೆಸರಿನಲ್ಲಿ ಉಂಡಿ-ಸಿಹಿ ತಿಂಡಿಗಳ ನೈವೇದ್ಯ ಮಾಡುವುದುಂಟು. ಇಲ್ಲಿಯ ಗೋಪ ಮುಂತಾದ ಜಾತಿಗಳಲ್ಲಿ ಗೌತಮಾದಿ ಗೋತ್ರಗಳು ಕಂಡುಬರುತ್ತವೆ. ಈ ಜನ ಮಾಂಸಾಹಾರ ಮುಟ್ಟುವವರಲ್ಲ. ವೈಶಾಲಿಯಲ್ಲಿ ಜನ್ಮತಳೆದ ಕಾರಣ ಮಹಾವೀರರಿಗೆ ವೈಶಾಲೀಯರೆಂದೂ, ಜ್ಞಾತೃ ಕುಲದಲ್ಲಿ ಜನ್ಮ ತಳೆದ ಕಾರಣ ಜ್ಞಾತೃ-ಪುತ್ರರೆಂದೂ ಹೆಸರು ಬಂತು. ಲಿಚ್ಛವೀ ವಂಶದಲ್ಲಿ ಕಣ್ದೆರೆದ ಈ ಮಹಾಜೀವ ಜನಕ್ಕೆಲ್ಲ ಪ್ರಿಯದರ್ಶಿಯಾಗಿತ್ತು; ಅವರ ವ್ಯಕ್ತಿತ್ವ ಜನಮನವನ್ನು ಸೂರೆಗೊಳ್ಳುವ ಹಾಗಿತ್ತು. ಅವರ ತಂದೆಯ ಹೆಸರು ಸಿದ್ಧಾರ್ಥ. ಅವರು ಜ್ಞಾತೃಕುಲದ ಕ್ಷತ್ರಿಯರಿಗೆಲ್ಲ ಪ್ರಮುಖರಾಗಿದ್ದರು. ವೈಶಾಲಿಯ ಸುಪ್ರಸಿದ್ಧ ಶಾಸಕರ ಪ್ರಮುಖರೆನಿಸಿದ್ದ ಚೇಟಕರ ಸೋದರಿ ತ್ರಿಶಲಾ ಮಹಾವೀರರ ತಾಯಿ. ಅವಳನ್ನು ವಿದೇಹದತ್ತಾ ಅಥವಾ ಪ್ರಿಯಕಾರಿಣಿ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತಿತ್ತು. ಮಹಾವೀರರ ತಂದೆ-ತಾಯಿಗಳು ಶ್ರಮಣೋಪಾಸಕರೂ, ಪಾರ್ಶ್ವನಾಥರ ಅನುಯಾಯಿಗಳೂ ಆಗಿದ್ದರು.

ತ್ರಿಶಲಾದೇವಿ ಗರ್ಭಧಾರಣ ಮಾಡಿದ ಆ ಮಹಾರಾತ್ರಿ ಹಲವೊಂದು ಸುಂದರ ಸ್ವಪ್ನಗಳನ್ನು ಕಂಡಳು. ಮೆಲ್ಲನೇ ತನ್ನ ಪತಿ ಸಿದ್ಧಾರ್ಥನ ಮೈದಡವಿ ತನ್ನ ಮಧುರ ಸ್ವಪ್ನಗಳ ಸಮಾಚಾರ ತಿಳಿಸಿದಳು. ಬೆಳಗಾಗುತ್ತಲೇ ಸ್ವಪ್ನ ಫಲ ತಿಳಿಸಬಲ್ಲ ಪಂಡಿತರನ್ನು ಕರೆಸಿ ಸಿದ್ಧಾರ್ಥದೊರೆ ತಮ್ಮ ರಾಣಿ ಕಂಡ ಕನಸುಗಳನ್ನು ವಿವರಿಸಿದರು. ಈ ಮನೆಯಲ್ಲೊಬ್ಬ ಮಹಾಪುರುಷನ ಜನ್ಮವಾಗಲಿದ್ದು ಆತ ವಿಶ್ವಕ್ಕೇ ಬೆಳಕು ನೀಡಬಲ್ಲ ದಿವ್ಯಜ್ಯೋತಿಯಾಗಿ ಬೆಳಗುವವನಿದ್ದಾನೆಂದು ಪಂಡಿತರು ಕಣಿ ನುಡಿದರು.

ಈ ಸ್ವಪ್ನ ಫಲದ ಬಗ್ಗೆ ಕೇಳಿ ಸಿದ್ಧಾರ್ಥ-ತ್ರಿಶಲಾರ ಆನಂದಕ್ಕೆ ಪಾರವೆಂಬುದೇ ಉಳಿಯಲಿಲ್ಲ. ತ್ರಿಶಲಾ ತನ್ನ ಗರ್ಭದ ಬೆಳವಣಿಗೆಯ ಬಗ್ಗೆ ವಿಶೇಷ ದಕ್ಷತೆ ವಹಿಸಿದಳು. ಕುಳಿತುಕೊಳ್ಳುವಾಗ, ಏಳುವಾಗ, ನಡೆಯುವಾಗ ಪ್ರತಿ ಕ್ಷಣವೂ ಎಚ್ಚರಿಕೆಯಿಂದಿರಲಾರಂಭಿಸಿದಳು. ಪರಿಮಿತವಾದ ಮತ್ತು ಪೌಷ್ಟಿಕವಾದ ಆಹಾರ ಸೇವಿಸುತ್ತಿದ್ದಳು. ಚಿಂತ, ಶೋಕ, ದುಗುಡ ಹಾಗೂ ಭಯಗಳಿಂದ ಮುಕ್ತಳಾಗಿರಲು ಪ್ರಯತ್ನಿಸುತ್ತಿದ್ದಳು; ಸದಾ ಪ್ರಸನ್ನ ಚಿತ್ತಳಾಗಿರುವಂಥ ಪುಣ್ಯ ಕಥೆಗಳನ್ನು ಕೇಳುತ್ತಿದ್ದಳು.

ಹೀಗೆ ನವಮಾಸಗಳುರುಳಿದವು; ಮೇಲೇಳು ದಿನಗಳೂ ಕಳೆದವು. ತ್ರಿಶಲಾದೇವಿ ಪ್ರಿಯದರ್ಶಿ ಶಿಶುವಿನ ಮಾತೆಯಾದಳು. ಎಲ್ಲೆಲ್ಲೂ ಆನಂದವೇ ಆನಂದ. ಅರಮನೆಯ ಸೇವಕಿಯರು ಹರುಷದಿಂದ ಧಾವಿಸುತ್ತ ಹೋಗಿ ಸಿದ್ಧಾರ್ಥ ದೊರೆಗೆ ಪುತ್ರೋತ್ಸವವಾದ ಸಂಭ್ರಮದ ಸಮಾಚಾರ ತಿಳಿಸಿದರು. ಈ ಸಂತೋಷದ ಸಮಾಚಾರ ಕಿವಿಗೆ ಬೀಳುತ್ತಲೇ ಅರಸನ ಆನಂದ ಉಕ್ಕೇರಿತು. ಈ ವಾರ್ತೆ ತಂದು ತಲುಪಿಸಿದ ದಾಸಿಯರಿಗೆ ಧಾರಾಳವಾದ ಉಡುಗೊರೆ ನೀಡಿ ಸತ್ಕಾರ ಮಾಡಲಾಯಿತಲ್ಲದೆ, ಅವರನ್ನೆಲ್ಲ ದಾಸ್ಯವೃತ್ತಿಯಿಂದ ಮುಕ್ತಗೊಳಿಸಲಾಯಿತು.

ಕ್ಷತ್ರಿಯ ಕುಂಡಗ್ರಾಮವನ್ನೆಲ್ಲಾ ಅಲಂಕರಿಸುವ ಆದೇಶ ನೀಡಲಾಯಿತು. ನಗರದೊಳಗೆಲ್ಲ ಕಸಗುಡಿಸಿ ಹಾದಿ-ಬೀದಿಗಳನ್ನು ಹಸನುಗೊಳಿಸಲಾಯಿತು; ಸುಗಂಧ ದ್ರವ್ಯಗಳನ್ನು ಸಿಂಪಡಿಸಲಾಯಿತು. ಮನೆಮನೆಗೂ ಸುಣ್ಣ-ಬಣ್ಣ ಬಳಿದು ಅವುಗಳ ಮೇಲೆ ಧ್ವಜಗಳನ್ನು ಹಾರಿಸಲಾಯಿತು; ಚಂದನ-ಕಲಶಗಳನ್ನು ಸ್ಥಾಪಿಸಲಾಯಿತು; ತಳಿರುತೋರಣಗಳನ್ನು ಕಟ್ಟಿ ಸಿಂಗರಿಸಲಾಯಿತು. ನಗರದ ತುಂಬಾ ಅಗರುಬತ್ತಿಗಳ ನವಿರು ವಾಸನೆಯಿಂದ ನವ ಚೈತನ್ಯ ಅರಳಿತು. ನಟರ ಆಟಗಳು ನಡೆದವು. ನರ್ತಕ-ನರ್ತಕಿಯರ ನರ್ತನಗಳಾರಂಭವಾದವು; ಅಭಿನಯ ಪ್ರದರ್ಶನಗಳೇರ್ಪಟ್ಟವು; ವಿದೂಷಕರು ತಮ್ಮ ಹಾಸ್ಯ-ವಿನೋದ ಕಥಾವಳಿಯಿಂದ ಜನಮನಗಳನ್ನು ರಂಜಿಸಿದರು; ಪುರಾಣ ಕಥೆಗಳ ಏರ್ಪಾಡಾಯಿತು; ಸ್ತೋತ್ರ ಪಾಠಗಳು ನಡೆದವು; ರಾಸಗೀತ ಕಾರ್ಯಕ್ರಮಗಳ ಸಂಯೋಜನೆಯಾಯಿತು. ಎಲ್ಲೆಲ್ಲೂ ಸಂಗೀತದ ಗುಂಜಾರವ; ವಾದ್ಯ ಮೇಳಗಳ ಸಡಗರ. ಹೀಗೆ ಹತ್ತು ದಿನಗಳವರೆಗೆ ರಾಜಧಾನಿಯ ಹತ್ತೂ ಕಡೆಗೆ ಸಂಭ್ರಮವೋ ಸಂಭ್ರಮ; ಉತ್ಸಾಹವೋ ಉತ್ಸಾಹ.

ನವಜಾತ ಶಿಶುವಿನ ಸಂಸ್ಕಾರಗಳನ್ನು ಮಾಡಿಸಲಾಯಿತು. ಅವನಿಗೆ ಸೂರ್ಯ-ಚಂದ್ರರ ದರ್ಶನ ಮಾಡಿಸಲಾಯಿತು. ನೃತ್ಯ-ಸಂಗೀತಾದಿ ಉತ್ಸವದಲ್ಲಿ ರಾತ್ರಿಯಿಡೀ ಜಾಗರಣೆ ನಡೆಯಿತು. ಹನ್ನೊಂದನೆಯ ದಿನ ಮಂಗಲ ಸ್ನಾನದಬಳಿಕ ಆಪ್ತ ಮಿತ್ರರಿಗೂ, ಬಂಧು-

ಬಳಗದವರಿಗೂ ಭರ್ಜರಿ ಔತಣ ನೀಡಲಾಯಿತು; ಭೋಜನ-ಪಾನ-ವಸ್ತ್ರೋಪಹಾರಗಳನ್ನಿತ್ತು ಅವರ ಸತ್ಕಾರ ಗೈಯಲಾಯಿತು. ಗಣರಾಜ ಸಿದ್ಧಾರ್ಥ ಸಕಲರ ಸಮ್ಮುಖದಲ್ಲಿ 'ಈ ಶಿಶು ಮಹಾರಾಣಿಯ ಗರ್ಭದಲ್ಲಿ ಮೂಡಿದ ಮಹಾದಿನದಿಂದಲೂ ನಮ್ಮ ರಾಜ್ಯದ ಪ್ರಗತಿಯಲ್ಲಿ ವೃದ್ಧಿಯಾಗುತ್ತ ಬಂದಿರುವುದನ್ನು ಗಮನಿಸಿ ಮಗುವಿಗೆ ವರ್ಧಮಾನನೆಂದು ನಾಮಕರಣ ಮಾಡುವುದುಚಿತವೆನಿಸುವುದು' ಎಂದು ಘೋಷಿಸಿದರು. ಕೂಡಿದ ಜನಸಮುದಾಯವೆಲ್ಲ ಜಯಜಯಕಾರಗಳಿಂದ ದೊರೆಯ ಪ್ರತಿಪಾದನೆಯನ್ನು ಅನುಮೋದಿಸಿತು.

## ಭಾಗ್ಯಶಾಲಿಯ ಬಾಲ್ಯಲೀಲೆ

ಅತ್ಯಂತ ವಾತ್ಸಲ್ಯಪೂರ್ಣ ವಾತಾವರಣದಲ್ಲಿ ವರ್ಧಮಾನನ ಪಾಲನೆ-ಪೋಷಣೆ ಮಾಡಲಾಯಿತು. ಸುರಕ್ಷಿತ ಸುಂದರ ಚಂಪಕ ವೃಕ್ಷದಂತೆ ಅವನ ಬೆಳವಣಿಗೆ ನಡೆಯಿತು. ಹಲವೊಂದು ಹೊಸ ದಾಯಿಯರನ್ನು ನಿಯಮಿಸಲಾಯಿತು. ಒಬ್ಬಳಿಗೆ ಹಾಲು ಕುಡಿಸುವ ಕೆಲಸವಾದರೆ; ಇನ್ನೊಬ್ಬಳಿಗೆ ಅಭ್ಯಂಗಲೇಪನಗೈದು ಸ್ನಾನ ಮಾಡಿಸುವ ಕೆಲಸ; ಮತ್ತೊಬ್ಬಳಿಗೆ ವಸ್ತ್ರ-ಆಭೂಷಣಗಳನ್ನು ತೊಡಿಸುವ ಮತ್ತು ಯಾರ ದೃಷ್ಟಿ ತಗಲದಂತೆ ತಿಲಕವಿಡುವ ಕೆಲಸ; ಒಬ್ಬಳಿಗೆ ಆಟಪಾಟಗಳಿಂದ ಮಗುವಿಗೆ ಮನರಂಜನೆಯೊದಗಿಸುವ ಕೆಲಸ, ಮತ್ತೊಬ್ಬಳಿಗೆ ಮಗುವನ್ನೆತ್ತಿಕೊಂಡು ಅತ್ತಿತ್ತ ಹೆಜ್ಜೆ ಹಾಕುವ ಕೆಲಸ.

ಬಾಲ್ಯದಿಂದಲೇ ವರ್ಧಮಾನ ಬಲು ವೀರ-ಧೀರ-ಗಂಭೀರ ಸ್ವಭಾವದವ. ಸಂದರ್ಭ ಬಂದಾಗಲೆಲ್ಲ ಬಲು ಧೈರ್ಯದಿಂದ ಕೆಲಸ ಪೂರೈಸುವ ಛಲವಿದ್ದವ. ಯಾವ ಪ್ರಸಂಗಕ್ಕೂ ಹೆದರಿ ಕಾಲ್ತೆಗೆಯುವ ಹೇಡಿತನ ಅವನದಲ್ಲ. ಒಂದು ದಿನ ವರ್ಧಮಾನ ತನ್ನ ಓರಗೆಯ ಗೆಳೆಯರೊಡನೆ ಆಟವಾಡುತ್ತಿದ್ದ. ಅಷ್ಟರಲ್ಲಿಯೇ ಆಟದ ಮೈದಾನದಲ್ಲೊಂದು ಭಯಂಕರ ಸರ್ಪ ಕಾಣಿಸಿಕೊಂಡಿತು. ವರ್ಧಮಾನನ ಮಿತ್ರರೆಲ್ಲ ಭಯಭೀತರಾಗಿ ಅತ್ತಿತ್ತ ಧಾವಿಸಿದರು. ಆದರೆ ವರ್ಧಮಾನ ಒಂದು ಕ್ಷಣವೂ ವಿಚಲಿತನಾಗದೆ ನಿಂತು, ಮುನ್ನಡೆದು, ಧೈರ್ಯದಿಂದ ಆ ಭಯಂಕರ ಸರ್ಪವನ್ನು ಕೈಯಿಂದೆತ್ತಿ ದೂರ ಬಿಸಾಕಿದ. ಇನ್ನೊಂದು ದಿನ ವರ್ಧಮಾನ ಹೀಗೆಯೇ ತನ್ನ ಮಿತ್ರರೊಡನೆ ಕ್ರೀಡಾ ಕೂಟದಲ್ಲಿದ್ದಾಗ, ಸ್ವರ್ಗದ ದೇವತೆಯೊಬ್ಬ ತನ್ನ ವೇಷ ಬದಲಾಯಿಸಿ ಬಂದು ಅವನ ಮಿತ್ರಮಂಡಲಿಯಲ್ಲಿ ಸೇರಿಕೊಂಡ; ಆಟದಲ್ಲಿ ಸೋತುಬಿಟ್ಟ. ನಿಯಮಗಳ ಪ್ರಕಾರ ಆಟದಲ್ಲಿ ಸೋತವ ವರ್ಧಮಾನನನ್ನು ತನ್ನ ಬೆನ್ನ ಮೇಲೆ ಕೂಡ್ರಿಸಿಕೊಂಡು ನಡೆಯಬೇಕೆಂದಿತ್ತು. ಸರಿ, ವರ್ಧಮಾನ ಅವನ ಬೆನ್ನೇರಿದ. ಆಗ ಆ ದೇವತೆ ತನ್ನ ದಿವ್ಯಶಕ್ತಿಯಿಂದ ತನ್ನ ಶರೀರವನ್ನು ಹಿಗ್ಗಿಸುತ್ತ ಹೋಗಿ - ಒಬ್ಬ ಭಯಾನಕ ರಾಕ್ಷಸನಂತೆ ಕಾಣಲಾರಂಭಿಸಿದ. ಆದರೆ ವರ್ಧಮಾನ ವಿಚಲಿತನಾಗಲಿಲ್ಲ. ಆತ ಆ ರಾಕ್ಷಸನ ಬೆನ್ನ ಮೇಲೊಂದು ಬಲವಾದ ಗುದ್ದು ಹಾಕಿದೊಡನೆ, ಆತ ನಿಜವಾದ ರೂಪದಲ್ಲಿ ಪ್ರಕಟವಾಗಿ ವರ್ಧಮಾನನ ಕ್ಷಮೆ ಕೋರಿದ!

ಇದರರ್ಥವಿಷ್ಟೆ - ವರ್ಧಮಾನ ಬಾಲ್ಯದಿಂದಲೂ ನಿರ್ಭೀತ ಪ್ರಕೃತಿಯವನಾಗಿದ್ದ. ಎಂಥ ಸಂಕಟ ಬಂದರೂ ಹೆದರದೆ ಬಲು ಧೈರ್ಯದಿಂದ ನಡೆದುಕೊಳ್ಳುತ್ತಿದ್ದ. ಈ ಕಾರಣದಿಂದಾಗಿಯೇ ವರ್ಧಮಾನನು ಮಹಾವೀರನೆಂದು ಹೆಸರು ಪಡೆದ; ಪ್ರಖ್ಯಾತನಾದ.

ವರ್ಧಮಾನನಿಗೆ ಎಂಟುವರ್ಷ ತುಂಬುತ್ತಲೇ, ಅವನನ್ನು ಪಾಠಶಾಲೆಗೆ ಕಳಿಸಬೇಕೆಂದು ಸಿದ್ಧಾರ್ಥ ದೊರೆಯ ಆಲೋಚನೆ. ಬಲು ಸಂಭ್ರಮದಿಂದ ಅವನ ಶಾಲಾ ಪ್ರವೇಶ ದಿನವನ್ನಾಚರಿಸಲಾಯಿತು. ಸ್ವಯಂ ಇಂದ್ರನೇ ಓರ್ವ ವೃದ್ಧ ಬ್ರಾಹ್ಮಣನ ವೇಷದಲ್ಲಿ ಬಂದು ವರ್ಧಮಾನನನ್ನು ಶಾಲೆಯವರೆಗೆ ಕರೆದೊಯ್ದು. ವರ್ಧಮಾನ ಆಚಾರ್ಯರಿಗೇ ವ್ಯಾಕರಣದ ಪ್ರಶ್ನೆಗಳನ್ನು ಕೇಳಲಾರಂಭಿಸಿದ. ಆಚಾರ್ಯರರ ಬಾಯಿ ಕಟ್ಟಿದಂತಾಗಿ ನಿರುತ್ತರ ಸ್ಥಿತಿಯಲ್ಲಿ ನಿಂತುಬಿಟ್ಟಾಗ, ವರ್ಧಮಾನ ಸ್ವತಃ ಅವರ ಆಸನದಲ್ಲಿ ಕುಳಿತು ವಿಷಯ ಪ್ರತಿಪಾದನೆಯನ್ನಾರಂಭಿಸಿದ.

## ಗೃಹಸ್ಥಾಶ್ರಮದೆಡೆಗೆ

ವರ್ಧಮಾನ ಯೌವನಾವಸ್ಥೆಯಲ್ಲಿ ಪದಾರ್ಪಣ ಮಾಡಿದ. ಈ ಅವಸ್ಥೆಯೊಡನೆ ಹೊಸ ಹೊಸ ಸಮಸ್ಯೆಗಳೂ ತಲೆದೋರುತ್ತವೆ. ಒಂದು ಮಮತಾಪೂರ್ಣ ವಾತಾವರಣದಲ್ಲಿ ಆಟ-ಪಾಠಗಳಲ್ಲಿ ಬಾಲ್ಯಾವಸ್ಥೆ ಕಳೆದು ಹೋಗುತ್ತದೆ. ಆದರೆ ಯೌವನಾವಸ್ಥೆ ಹೊಸ ಹೊಸ ಆಸೆ-ಆಕಾಂಕ್ಷೆಗಳನ್ನೂ ಉತ್ಸಾಹ-ಉದ್ವೇಗಗಳನ್ನೂ ಹೊತ್ತುಕೊಂಡುಬರುತ್ತದೆ. ಭಾವೀಜೀವನದ ಬಗ್ಗೆ ಗಂಭೀರವಾಗಿ ವಿಚಾರಮಾಡಲು ತೊಡಗಿಸುತ್ತದೆ.

ಗಣರಾಜನ ಮುದ್ದು ಮಗನಾಗಿದ್ದ ವರ್ಧಮಾನನಿಗೆ ಭೌತಿಕ ಸುಖ-ಸಂತೋಷಗಳ ಕೊರತೆಯೆಂಬುದಿರಲಿಲ್ಲ; ಭೋಗ-ವಿಲಾಸಗಳಲ್ಲಿ ವ್ಯತ್ಯಯವೆಂಬುದಿರಲಿಲ್ಲ. ಆದರೂ ವರ್ಧಮಾನನ ಹೃದಯಾಂತರಾಳದಲ್ಲಿ ಸದಾ ಕಾಲ ಪ್ರಶ್ನೆಗಳ ಮೇಲೆ ಪ್ರಶ್ನೆ: ಸುಖ ಜೀವನದ ಈ ಸೌಭಾಗ್ಯ ಸಕಲರಿಗೂ ಏಕೆ ಸಿಗುವುದಿಲ್ಲ? ಮನುಷ್ಯ-ಮನುಷ್ಯರ ನಡುವೆ ಇಷ್ಟೊಂದು ತಾರತಮ್ಯವೇಕೆ? ಕೆಲವರಿಗೆ ಅಪಾರ ಸುಖವೇಕೆ, ಹಲವರಿಗೆ ಸಾಗರದಷ್ಟು ದುಃಖವೇಕೆ? ಇಂಥ ಪ್ರ ಶ್ನೆಗಳ ಜತೆಗೆ ಜೀವನ-ಮರಣಗಳ ಪ್ರಶ್ನೆಯೂ ವರ್ಧಮಾನನ ಅಂತರಂಗದಲ್ಲಿ ಕಿಡಿಯಾಡಿಸಲಾರಂಭಿಸಿತು. ಮನುಷ್ಯ ಬರುವುದೆಲ್ಲಿಂದ, ಮರಣಾನಂತರ ಹೋಗುವುದೆಲ್ಲಿಗೆ? ಈ ಜೀವನದ ರಹಸ್ಯವೇನು? ಈ ಜಗತ್ತಿನಲ್ಲಿ ದುಃಖಿತರ ಸಂಖ್ಯೆಯೇ ಅಧಿಕವಾಗಿರಲು ಕಾರಣವೇನು? ಮನುಷ್ಯನ ಆಸೆಯೆಂಬುದು ಪೂರ್ತಿಯಾಗಿ ಹಿಂಗುವುದಿಲ್ಲವೇಕೆ? ಮನುಷ್ಯ ತನ್ನ ಹಿತವಾವುದು, ಅಹಿತವಾವುದೆಂಬುದನ್ನೂ ತಿಳಿಯದಿರುವಷ್ಟು ಅಂಧ ವಿಶ್ವಾಸ ಮತ್ತು ಮೂಢ ನಂಬಿಕೆಗಳಲ್ಲಿ ಮುಳುಗಿರುವುದೇಕೆ? ಈ ಪ್ರಶ್ನೆಗಳನ್ನೆಲ್ಲ ಮೆಲುಕಾಡಿಸುತ್ತಲೇ ವರ್ಧಮಾನ ಯೌವನಾವಸ್ಥೆಯನ್ನು ಪ್ರವೇಶಿಸಿದ; ಆ ಪ್ರಶ್ನೆಗಳೊಡನೆಯೇ ಕೆಲ ದಿನಗಳನ್ನು ಕಳೆದ.

ಯೌವನಾವಸ್ಥೆಯ ಪದಾರ್ಪಣವಾಯಿತು. ಆಗ ವರ್ಧಮಾನ ತುಂಬಾ ಪ್ರಭಾವಶಾಲಿ; ಅದ್ಭುತ ವ್ಯಕ್ತಿತ್ವವುಳ್ಳವ. ಕಾಯ್ದು ಹದಗೊಂಡ ಚೊಕ್ಕ ಚಿನ್ನದಂತೆ ಅವನ ಶರೀರ ಕಾಂತಿ. ಅವನ ಹಣೆ, ಅವನ ಕಣ್ಣು, ಮೂಗು, ಕಿವಿ, ಕಪೋಲಗಳೆಲ್ಲ ಪಡಿಯಚ್ಚಿನಲ್ಲಿ ಹಾಕಿ ತೆಗೆದಂತೆ ಪ್ರಮಾಣ ಬದ್ಧವಾಗಿದ್ದವು. ಅವನ ತುಂಬು ಪ್ರಾಯದ ಈ ಲಕ್ಷಣಗಳನ್ನು ಕಂಡು ತಂದೆ-ತಾಯಿಗಳಿಗೆ ಹಿಗ್ಗೇ ಹಿಗ್ಗು. ವಿಜೃಂಭಣೆಯಿಂದ ಅವನ ವಿವಾಹ ನೆರವೇರಿಸಬೇಕು, ಸಂಭ್ರಮಪಡಬೇಕು, ಮಂಗಲ ಗೀತೆಗಳನ್ನು ಹಾಡಿಸಬೇಕು, ಯೋಗ್ಯ ಜನರಿಗೆ ದಾನ-ಮಾನ-ಸನ್ಮಾನಗಳನ್ನು ನೀಡಬೇಕು, ಆಪ್ತೇಷ್ಟರಿಗೆ ಮಾನ-ಮರ್ಯಾದೆ ಮಾಡಬೇಕು-ಎಂದೆಲ್ಲಾ ಅವರ ಲೆಕ್ಕ. ವರ್ಧಮಾನ ಗೃಹಸ್ಥಾಶ್ರಮ ಪ್ರವೇಶಿಸುವ ದಿನ ಎಂಥ ಮಹಾ-ದಿನವೆನಿಸಬಹುದಲ್ಲ ಎಂದು

ಆಲೋಚಿಸುತ್ತ ವರ್ಧಮಾನನ ತಂದೆ-ತಾಯಿಗಳು ಅಪಾರ ಆನಂದ ಪಡುತ್ತಲಿದ್ದರು. ರೂಪದಲ್ಲಿ, ಗುಣದಲ್ಲಿ ನಾ-ನೀ ಎನ್ನುವ ಕನ್ಯಾಮಣಿಗಳನೇಕರ ಪ್ರಸ್ತಾಪ ಬರಲಾರಂಭಿಸಿತು-ರಾಜ-ರಾಣಿಯರನೇಕರು ವರ್ಧಮಾನನ ತಂದೆ-ತಾಯಿಗಳ ಜತೆಗೆ ಮದುವೆಯ ಮಾತುಕತೆಗಳಿಗಾಗಿ ಓಡಾಡ ತೊಡಗಿದರು. ಸಿದ್ಧಾರ್ಥರಂತೂ ಈ ವಿಚಾರಕ್ಕೆ ಸಿದ್ಧರಾಗಿಯೇ ಇದ್ದರು. ಆದರೆ ವರ್ಧಮಾನನ್ನು ಒಂದು ಮಾತು ಕೇಳದೆ ಈ ವಿಷಯದಲ್ಲಿ ಮುಂದುವರಿಯುವುದು ಸರಿಯಲ್ಲ ಎನಿಸಿತು. ಅವನ ಮಿತ್ರರ ಮೂಲಕ ಅವನ ಅಭಿಪ್ರಾಯವೇನೆಂದು ತಿಳಿಯಲು ಪ್ರಯತ್ನಿಸಿದರು. ಈ ಗೃಹಸ್ಥಾಶ್ರಮದ ಗೊಡವೆಗೇ ಹೋಗಬಾರದೆಂದು ಎಂದಿನಿಂದಲೋ ಆಲೋಚಿಸುತ್ತಿದ್ದುದಾಗಿ ವರ್ಧಮಾನ ಹೇಳಿದ ಆದರೆ ತ್ರಿಶಲಾದೇವಿಯ ಮಾತೃ ಹೃದಯ ಕೇಳಬೇಕಲ್ಲ. ಕೊನೆಗೂ ತಾಯಿಯ ಕರುಳಿನ ಕರೆಗೆ ಓಗೊಡಲೇಬೇಕಾಯಿತು. ಮನಸ್ಸಿಲ್ಲದ ಮನಸ್ಸಿನಿಂದಲಾದರೂ ಮದುವೆಗೆ ಒಪ್ಪಿಕೊಳ್ಳಲೇಬೇಕಾಯಿತು.

ರಾಜಕುಮಾರಿ ಯಶೋದೆಯೊಡನೆ ವರ್ಧಮಾನ ವಿವಾಹ ನೆರವೇರಿತು.[1] ಅವರ ಬಾಳ ಬಳ್ಳಿಗೆ ಒಂದು ಕುಸುಮವೂ ಅರಳಿತು. ಅವರ ಮಗಳ ಹೆಸರು ಪ್ರಿಯದರ್ಶನಾ, ಅದೇ ನಗರದ ಕ್ಷತ್ರಿಯ ಕುಮಾರ ಜಾಮಾಲಿಯೊಡನೆ ಅವಳ ಲಗ್ನವಾಯಿತು.[2]

ಗೃಹಸ್ಥಾಶ್ರಮದಲ್ಲಿದ್ದರೂ ವರ್ಧಮಾನರಿಗೆ ಸಂಸಾರದ ಮೋಹ-ಮಾಯೆ ಅಂಟಿಕೊಳ್ಳಲಿಲ್ಲ. ಅವರು ಏಕಾಂತದಲ್ಲಿ ಕುಳಿತು ಯೋಚನಾ ಮಗ್ನರಾಗಿರುತ್ತಿದ್ದರು. ಸಾಂಸಾರಿಕ ಭೋಗಲಾಲಸೆಯಲ್ಲಿ ಮೈಮರೆತು ಪ್ರಪಂಚದ ಮಾಯಾಜಾಲದಲ್ಲಿ ಸಿಲುಕಿಕೊಂಡಿರುವುದು ಸರಿಯೆ? ಮನುಷ್ಯನು

---

1. ವರ್ಧಮಾನರ ಲಗ್ನದ ವಿಚಾರದಲ್ಲಿ ಪರಸ್ಪರ ವಿರೋಧಿಯೆನಿಸುವ ಅಭಿಪ್ರಾಯಗಳುಂಟು. (ಅ) ಸಾಮಾನ್ಯತಃ ದಿಗಂಬರ ಸಂಪ್ರದಾಯದಲ್ಲಿ ಮಹಾವೀರರು ಅವಿವಾಹಿತರೆಂದೂ ಮತ್ತು ಶ್ವೇತಾಂಬರ ಸಂಪ್ರದಾಯದಲ್ಲಿ (ಆಚಾರಾಂಗ 2-15-15; ಕಲ್ಪಸೂತ್ರ 5.112) ವಿವಾಹಿತರೆಂದೂ ಭಾವಿಸಲಾಗಿದೆ. ಕೆಲವು ಶ್ವೇತಾಂಬರ ಗ್ರಂಥಗಳಲ್ಲಿ (ಸಮವಾಯಾಂಗ, 19; ಸ್ಥಾನಾಂಗ 471; ಆವಶ್ಯಕ ನಿರ್ಯುಕ್ತಿ 221-22; ವಿಮಲಸೂರಿಪ ಉಮಚರಿಯ 57-58) ಅವರು ಅವಿವಾಹಿತರೆಂದು ಹೇಳಲಾಗಿದೆ. (ಆ) ದಿಗಂಬರ ಪರಂಪರೆಯ ಪ್ರಕಾರ ಕಲಿಂಗದ ದೊರೆ ಜಿತಶತ್ರುವಿನ ಕನ್ಯೆ ಯಶೋದೆಯೊಡನೆ ಮಹಾವೀರರ ಲಗ್ನವಾಗುವ ನಿಶ್ಚಯವಾಗಿತ್ತು. ವಿವಾಹದ ಮಂಗಲ ಕಾರ್ಯವೂ ನಡೆಯಿತು. ಆದರೆ ಅದೇ ಹಂತದಲ್ಲಿ ವರ್ಧಮಾನರು ಸಂಸಾರದ ಮೋಹ-ಮಾಯೆ ಬಿಟ್ಟು ತಪಸ್ಸಿಗೆ ಹೊರಟು ಹೋದರು (ಜಿನಸೇನ, ಹರಿವಂಶ ಪುರಾಣ, 66.8) (ಇ) ಬಾಲ ವರ್ಧಮಾನನ ಜನ್ಮೋತ್ಸವದಂತೆ ಅವರ ವಿವಾಹ ಮಹೋತ್ಸವದ ಉಲ್ಲೇಖಗಳು ಸಿಗುವುದಿಲ್ಲ. (ಈ) ವಿವಾಹ ಸಮಯದಲ್ಲಿ ಮಹಾವೀರರ ವಯಸ್ಸಿನ ಉಲ್ಲೇಖವೂ ಇಲ್ಲ. (ಉ) ಯಶೋದೆಯ ಬಗೆಗೂ ಹೆಚ್ಚಿನ ವಿವರಗಳನ್ನು ಯಾರೂ ನೀಡಿಲ್ಲ. (ಊ) ವರ್ಧಮಾನರ ದೀಕ್ಷಾ-ಪ್ರಸಂಗದಲ್ಲಿ ಯಶೋದೆಯ ಉಲ್ಲೇಖವೇ ಬಾರದಿರುವುದು ವಿಚಾರಣೀಯವಾಗಿದೆ. (ಋ) ಕೇವಲ ಜ್ಞಾನಪ್ರಾಪ್ತಿಯ ನಂತರ ಭಗವಾನ್ ಮಹಾವೀರರು ವೈಶಾಲಿಯ ಸಂಚಾರಕ್ಕೆ ಬಂದ ಸಂದರ್ಭದಲ್ಲೂ ಯಶೋದೆಯ ಉಲ್ಲೇಖ ಬಂದಿಲ್ಲ.

2. ಭಗವತೀ ಸೂತ್ರದಲ್ಲಿ ಬಂದ ಜಾಮಾಲಿಯ ಪ್ರಕರಣದಲ್ಲಿ ಈ ಸಂಗತಿ ಕಾಣಿಸಲಾಗಿಲ್ಲ.

ಸಂಸಾರದ ಈ ಜಂಜಡದಿಂದ ಮುಕ್ತನಾಗಲು ಪ್ರಬಲ ಪುರುಷಾರ್ಥದ ಅವಶ್ಯಕತೆಯಿಲ್ಲವೇ? ಮನುಷ್ಯ ಜನ್ಮ ದೊರೆಯುವುದೇ ಕಠಿಣ. ಮನುಷ್ಯ ಜನ್ಮ ಪಡೆದ ನಂತರ ಸಮ್ಯಕ್‌ಜ್ಞಾನ ಪ್ರಾಪ್ತವಾಗುವುದೂ ಕಠಿಣ. ಧರ್ಮದ ರಹಸ್ಯವನ್ನು ಅರ್ಥ ಮಾಡಿಕೊಳ್ಳುವುದು ಮತ್ತೂ ಕಠಿಣ. ಕರ್ಮಗಳ ನಾಶಗೈದು ತನ್ನನ್ನು ತಾನೆ ಜಯಿಸಿಕೊಳ್ಳುವುದು ಸರ್ವ ಪ್ರಥಮ ಕರ್ತವ್ಯವಾಗಿದೆ. ಜೀವನವೆಂಬುದು ಕ್ಷಣಭಂಗುರ, ಅದರದಾವ ಭರವಸೆಯಿರುವದಿಲ್ಲ. ಯಾವಾಗ ಯಮದೂತರು ಬಂದು ಹಾಜರಾಗುತ್ತಾರೋ ತಿಳಿಯದು. ಪ್ರಪಂಚದಲ್ಲಿ ತಮ್ಮ ಅರಿವು ತಮಗಿಲ್ಲದ ಬೇಕಾದಷ್ಟು ಪ್ರಾಣಿಗಳಿವೆ. ಅಂತೆಯೇ ಅವು ಸಂಸಾರದ ಕೆಸರಿನಲ್ಲಿ ಸಿಲುಕಿಕೊಂಡಿವೆ. ಕಾಮ-ಕ್ರೋಧ-ಮದ-ಮೋಹ ಮತ್ತು ಲೋಭದ ವಶೀಭೂತವಾಗಿದ್ದು ಪರರಿಗೆ ತೊಂದರೆ ಕೊಡುತ್ತಲೇ ಇರುತ್ತವೆ. ಮನುಷ್ಯರೂ ಅಷ್ಟೇ ಇವರೆಲ್ಲರ ಹಿತರಕ್ಷಣೆಗಾಗಿ ಮತ್ತು ಸನ್ಮಾರ್ಗದರ್ಶನಕ್ಕಾಗಿ ಅನವರತ ಪುರುಷಾರ್ಥ, ಅಚಲಧೈರ್ಯ ಮತ್ತು ಉನ್ನತ ವ್ಯಕ್ತಿತ್ವಗಳ ಅವಶ್ಯಕತೆಯಿರುತ್ತದೆ.

## (ಆ) ದೀಕ್ಷಾಗ್ರಹಣ ಮತ್ತು ಕೇವಲ ಜ್ಞಾನಪ್ರಾಪ್ತಿ

ಯೌವನಾವಸ್ಥೆಯಲ್ಲಿ ಮನುಷ್ಯನ ಇಂದ್ರಿಯಗಳ ವಿಕಾಸವಾಗುತ್ತದೆ; ಭೋಗಾಸಕ್ತಿ ಬೆಳೆಯುತ್ತದೆ; ತನ್ನಷ್ಟರಲ್ಲಿಯೇ ಒಂದು ಅಸಾಧಾರ ಸಾಮರ್ಥ್ಯದ ಅನುಭೂತಿಯುಂಟಾಗುತ್ತದೆ. ಇಂಥ ಸೂಕ್ಷ್ಮ ಸಂದರ್ಭದಲ್ಲಿ ಪ್ರಪಂಚದ ಮೋಹ-ಮಮತೆಗಳನ್ನು ತ್ಯಾಗ ಮಾಡಿ ದೀಕ್ಷಾಗ್ರಹಣ ಮಾಡಬೇಕೆಂಬ ಉತ್ಕಟೇಚ್ಛೆ ಯಾರಾದರೂ ಮನದಲ್ಲಿ ಜಾಗೃತಗೊಳ್ಳುವುದೆಂದರೆ ಅಪರೂಪ ಸಂಗತಿಯೇ.

ಮಹಾವೀರರು ಇಪ್ಪತ್ತೆಂಟು ವರ್ಷದವರಿದ್ದಾಗಲೇ ಅವರ ತಂದೆ-ತಾಯಿ ಸ್ವರ್ಗಸ್ಥರಾಗಿದ್ದರು.[1] 'ಹೀಗಾಗಿ ಅವರ ಜೀವನಾವಧಿಯಲ್ಲಿ ತಾವು ದೀಕ್ಷಾಗ್ರಹಣ ಮಾಡುವುದಿಲ್ಲ' ಎಂಬ ಪ್ರತಿಜ್ಞೆಯಿಂದ ಮಹಾವೀರರು ಮುಕ್ತರಾಗಿದ್ದರು. ಆದ್ದರಿಂದ ಅವರು ತಮ್ಮ ಅಣ್ಣ ನಂದಿವರ್ಧನರ ಸಮ್ಮುಖದಲ್ಲಿ ತಮ್ಮ ದೀಕ್ಷಾಗ್ರಹಣದ ಪ್ರಸ್ತಾಪವೆತ್ತಿದರು. ಆದರೆ ಅಣ್ಣ ಒಪ್ಪಲಿಲ್ಲ. "ಶ್ರಮಣ-ನಿರ್ಗ್ರಂಥೀಯ ತಪ ಮತ್ತು ವ್ರತ-ನಿಯಮಗಳ ಪಾಲನೆಗೈಯುವುದು ತುಂಬಾ ಕಠಿಣ. ಎಂಥೆಂಥ ತಪಸ್ವಿಗಳಿಗೂ ಅದು ಸಾಧ್ಯವೆನಿಸುವುದಿಲ್ಲ. ನಿರ್ಗ್ರಂಥ ಪ್ರವಚನವೂ ಅಷ್ಟು ಸುಲಭವಲ್ಲ. ನಿನಗಿನ್ನೂ ಎಳೆದು ಪ್ರಾಯ. ವಯಸ್ಸು ಬೆಳೆದ ಬಳಿಕ ನೀನು ದೀಕ್ಷಾಗ್ರಹಣ ಮಾಡಬಹುದು"-ಎಂದರು ಅವರಣ್ಣ.

ಮಹಾವೀರರಿಗೆ ಆಗಲೇ ಜೀವನದ ನಿಸ್ಸಾರತೆ ಚೆನ್ನಾಗಿ ಮನವರಿಕೆಯಾಗಿತ್ತು. ಆದರೂ ತಮ್ಮ ಅಣ್ಣನ ಆಣತಿಗೆ ಮನ್ನಣೆಯಿತ್ತು ಹಾಗೂ ಹೀಗೂ ಎರಡು ವರ್ಷಗಳ ಕಾಲ ಕಳೆದರು.

ಒಂದು ದಿನ ಅವರ ಮನದಲ್ಲಿ ಜನ ಕಲ್ಯಾಣದ ಭಾವನೆ ಪ್ರಬಲಗೊಂಡಿತು. ತಾವಿನ್ನು ಮನೆಮಾರು ಬಿಟ್ಟು ಹೊರಡುವುದೇ ವಾಸಿಯೆಂದು ನಿರ್ಧರಿಸಿದರು. ಯಾರೆಷ್ಟು ತಿಳಿಹೇಳಿದರೂ ಪ್ರಯೋಜನವಾಗಲಿಲ್ಲ. ಸರಿ, ಅವರಿಗೆ ನಿಷ್ಕ್ರಮಣ-ಸತ್ಕಾರ ನೀಡುವ ಸಕಲ ಸಿದ್ಧತೆಗಳೂ ನಡೆದವು. ರತ್ನ ಖಚಿತ ಪಲ್ಲಕ್ಕಿ ಸಿದ್ಧವಾಯಿತು. ಸುಗಂಧಮಿಶ್ರಿತ ಜಲದಲ್ಲಿ ಸ್ನಾನ ಮಾಡಿಸಲಾಯಿತು.

1. ದಿಂಗಬರ ಮನ್ನಣೆಯ ಪ್ರಕಾರ ಮಹಾವೀರರ ದೀಕ್ಷಾಗ್ರಹಣ ಸಂದರ್ಭದಲ್ಲಿ ಅವನ ತಂದೆ-ತಾಯಿ ಉಪಸ್ಥಿತರಿದ್ದು ಮಹಾವೀರರಿಗೆ ತಿಳಿಹೇಳಿದರು.

ಉತ್ತಮವಾದ ವಸ್ತ್ರಾಭರಣಗಳನ್ನು ತೊಟ್ಟು ಮಹಾವೀರರು ಪೂರ್ವ ದಿಸೆಗೆ ಮುಖ ಮಾಡಿ ಪಲ್ಲಕ್ಕಿಯಲ್ಲಿ ಕುಳಿತರು. ಅವರ ಬಲ ಬದಿಗೆ ಶುದ್ಧ ಮತ್ತು ಶ್ವೇತ ವಸ್ತ್ರಾಲಂಕಾರ-ವಿಭೂಷಿತಳಾದ ಕುಲವೃದ್ಧೆಯೂ, ಎಡಬದಿಗೆ ರಜೋಹರಣ ಮತ್ತು ದೀಕ್ಷಾಗ್ರಹಣದ ಸಾಮಗ್ರಿಗಳೊಂದಿಗೆ ಹಿರಿಯ ದಾಸಿಯೂ ಕುಳಿತರು; ಸಕಲ ಶೃಂಗಾರ ಮಾಡಿಕೊಂಡ ಯುವತಿಯರು ಛತ್ರ-ಚಾಮರ ಹಿಡಿದು ನಡೆದಿದ್ದರು.

ವರ್ಧಮಾನರು ತಮ್ಮ ಬಹು ಮೌಲ್ಯ ಮತ್ತು ಅತ್ಯಂತ ಸುಂದರ ವೇಷ-ಭೂಷಣಗಳ ಪರಿತ್ಯಾಗ ಮಾಡಿದರು. ಸರಸ ಮತ್ತು ಸ್ವಾದಿಷ್ಟ ಪದಾರ್ಥಗಳ ಸೇವನೆ ನಿಲ್ಲಿಸಿ ಬಿಟ್ಟರು. ಆಪ್ತೇಷ್ಟರ ಮತ್ತು ಬಂಧುಮಿತ್ರರ ಸಹವಾಸವನ್ನೂ ತ್ಯಜಿಸಿದರು. ತಮ್ಮ ಧನ-ಕನಕ-ಮುತ್ತು-ಮಾಣಿಕ್ಯಗಳ ಮೋಹವೆಂಬುದನ್ನು ನಿರಂತರವಾಗಿ ತೊರೆದರು. ಲೋಕಾಂತದಿಂದ ಏಕಾಂತಕ್ಕೆ ತೆರಳಿದರು. ಹೀಗೆ ಅವರು ನಿಷ್ಕ್ರಮಿಸುತ್ತಿರುವಾಗ ಪ್ರಜಾ ಜನರೆಲ್ಲ ಅಭಿನಂದನೆಯ ಮಳೆಗರೆದರು; ಗುರು-ಹಿರಿಯರು ಆಶೀರ್ವಾದಗಳನ್ನು ನೀಡಿದರು; ಶುಭ ಕೋರಿದರು. ಹೀಗೆ ಮಹಾವೀರರ ಪಲ್ಲಕ್ಕಿ ಕ್ಷತ್ರಿಯ ಕುಂಡಗ್ರಾಮದಿಂದ ಹೊರಬಿದ್ದು ಜ್ಞಾತೃಖಂಡದ ಉದ್ಯಾನವನದೆಡೆಗೆ ನಡೆಯಿತು.

ಮಾಘ ಮಾಸದ ಹತ್ತನೆಯ ದಿನ. ಉದ್ಯಾನದ ನಾಲ್ದೆಸೆಗಳಲ್ಲೂ ಜಯಘೋಷಗಳು ಮೊಳಗುತ್ತಿರುವಂತೆ, ಮಹಾವೀರರು ಪಲ್ಲಕ್ಕಿಯಿಂದ ಕೆಳಗಿಳಿದರು. ಮೈ ಮೇಲಿನ ವಸ್ತ್ರಾಭರಣಗಳನ್ನೆಲ್ಲ ತೆಗೆದಿರಿಸಿದರು. ಪಂಚ ಮುಷ್ಟಿಯಿಂದ ತಮ್ಮ ಕೇಶಲೋಚನ ಮಾಡಿಸಿಕೊಂಡರು. ಆ ಕೇಶರಾಶಿಯನ್ನೊಂದು ರೇಷ್ಮೆಯ ಬಟ್ಟೆಯಲ್ಲಿ ಕಟ್ಟಿಕೊಂಡು ಕುಲವೃದ್ಧೆಯರೂ ಬಂಧು ಮಿತ್ರರೂ ಮಹಾವೀರರಿಗೆ ಶುಭ ಕೋರಿದರು. "ನಿಮ್ಮ ಸಂಯಮ ವ್ರತ ಸಫಲವಾಗಲಿ; ಯಾವ ನಿಯಮಪಾಲನೆಯಲ್ಲಿಯೂ ವ್ಯತ್ಯಯ ಬಾರದಿರಲಿ; ನಿಮ್ಮಿಂದ ತಿಲ ಮಾತ್ರವೂ ಪ್ರಮಾದವಾಗದಿರಲಿ!"

## ಮಹಾವೀರರ ದೀರ್ಘ ತಪಸ್ಸು

ಮಹಾವೀರರ ವೈಚಾರಿಕ ಕ್ಷಿತಿಜ ವಿಸ್ತಾರಗೊಳ್ಳಲಾರಂಭಿಸಿತ್ತು. ಅವರ ತಾತ್ವಿಕ ಜೀವನದಲ್ಲಿ ನವ ಅರುಣೋದಯವಾಗಿತ್ತು. ಹಳೆಯ ಬಂಧು-ಮಿತ್ರರ ಎಳೆತವಿಲ್ಲ; ಆಪ್ತೇಷ್ಟರ ಆತ್ಮೀಯತೆಯ ಸೆಳೆತವಿಲ್ಲ; ಯಾರ ಮೋಹವಿಲ್ಲ; ಯಾತರದೂ ಹಂಗಿಲ್ಲ. ಯಾವ ಚಿಂತೆಯಿಲ್ಲ; ದ್ವಂದ್ವವಿಲ್ಲ. ಯಾವ ಕೊರಗೂ ಇಲ್ಲ; ಬೆರಗೂ ಇಲ್ಲ. ಅದೊಂದು ಅಪೂರ್ವ ಯೋಗ; ಅವಿಚಲ ನಿರ್ಧಾರದ, ಅವಿರತ ತಪಸ್ಸಿನ ಮಹಾಯೋಗ. ಎಷ್ಟು ಅಡ್ಡಿ-ಆತಂಕಗಳೇ ಬರಲಿ, ಕಷ್ಟ-ಸಂಕಟಗಳೊದಗಲಿ ತಮ್ಮ ಧ್ಯೇಯದಿಂದ ಕದಲಬಾರದು; ಬಿಟ್ಟು ಬಂದ ದಾರಿಯ ಕಡೆಗೆ ಕಣ್ಣು ಹೊರಳಿಸಬಾರದು; ಇಟ್ಟ ಹೆಜ್ಜೆಯಿಂದ ಹಿಂದೆ ಸರಿಯಬಾರದೆಂಬುದೇ ಅವರ ದೃಢ ನಿಶ್ಚಯವಾಗಿತ್ತು.

ಈ ವಿಚಾರ ಪ್ರಣಾಲಿಯೊಡನೆ ಜ್ಞಾತೃಖಂಡದಿಂದ ಹೊರಟು ಅವರು ಕುಮ್ಮಾರ ಗ್ರಾಮ ಸೇರಿದರು; ಅಲ್ಲಿ ಧ್ಯಾನಮಗ್ನರಾದರು. ಅಷ್ಟರಲ್ಲಿ ತನ್ನ ಎತ್ತುಗಳನ್ನು ಮೇಯಿಸುತ್ತ ದನಗಾಹಿಯೊಬ್ಬ ಅಲ್ಲಿಗೆ ಬಂದ. 'ಕೊಂಚ ನನ್ನ ಎತ್ತುಗಳ ಮೇಲೆ ನಿಗಾ ಇರಲಿ' ಎಂದು ಮಹಾವೀರರಿಗೆ ಹೇಳಿದವನೇ ತಾನು ಅಲೆದಾಡುತ್ತ ಹೊರಟ ಕೆಲಕಾಲದ ನಂತರ ಮರಳಿ ಬಂದು ನೋಡಿದರೆ

ಅಲ್ಲಿ ಎತ್ತುಗಳ ಪತ್ತೆಯಿಲ್ಲ. 'ಎಲ್ಲಿ ನನ್ನ ಎತ್ತುಗಳು?' ಎಂದು ಮಹಾವೀರರನ್ನು ಕೇಳಿದರೆ ಅವರಿಂದ ಉತ್ತರವಿಲ್ಲ, ಅವರು ಧ್ಯಾನದಲ್ಲಿ ತಲ್ಲೀನರಾಗಿದ್ದರು. ಆಚೆ-ಈಚೆ ಹುಡುಕಾಡುತ್ತಿರುವಾಗ ಎತ್ತುಗಳು ದೃಷ್ಟಿಗೆ ಬಿದ್ದವು. 'ಇದು ಈ ಮನುಷ್ಯನದೇ ಮಾಟವಾಗಿರಬೇಕು' ಎಂದು ದನಗಾಹಿ ಕೈಯಲ್ಲಿದ್ದ ಹಗ್ಗದಿಂದ ಮಹಾವೀರರ ಬೆನ್ನ ಮೇಲೆ ಎರಡು ಬಾರಿಸಿಯೇ ಬಿಟ್ಟ. ಮಹಾವೀರರ ತಪಸ್ವೀ ಜೀವನದ ಪ್ರಥಮ ಪಾಠವಿದು: ಜೀವನವೆಂಬುದು ಹೂವಿನ ಹಾಸಿಗೆಯಲ್ಲ; ಮುಳ್ಳಿನ ಮಾಲೆ!

ಕುಮ್ಮಾರ ಗ್ರಾಮದಿಂದ ಹೊರಟು ಮಹಾವೀರರು ಮೊರಾಗ ಪರಿಸರ ತಲುಪಿದರು. ಅಲ್ಲಿ ತಪಸ್ವೀ ಕುಲಪತಿಯೊಬ್ಬರ ಆಶ್ರಮವಿತ್ತು. ತಮ್ಮ ಆಶ್ರಮದಲ್ಲಿಯೇ ಚಾತುರ್ಮಾಸ ಕಳೆಯಬೇಕೆಂದು ಕುಲಪತಿಗಳು ಮಹಾವೀರರನ್ನು ಕೇಳಿಕೊಂಡರು. ಗುರುಗಳ ಮಾತು ಮೀರುವುದೇಕೆ? ಮಹಾವೀರರು ಒಪ್ಪಿಕೊಂಡರು. ಗುರುಕುಲದ ಬಳಿಯ ಹುಲ್ಲಿನ ಕುಟೀರವೊಂದರಲ್ಲಿ ನಿಂತರು. ಅದು ಅನಾವೃಷ್ಟಿಯ ವರ್ಷವಾದ್ದರಿಂದ ಎಲ್ಲಿಯೂ ಹಸಿರಿನ ಹೆಸರೆಂಬುದಿರಲಿಲ್ಲ. ತಿನ್ನಲು ಹುಲ್ಲಿಲ್ಲದೆ ಹಸುಗಳು ಅತ್ತಿತ್ತ ಅಲೆದಾಡಿ ಬಂದು ಕೊನೆಗೆ ಈ ಹುಲ್ಲಿನ ಗುಡಿಸಲಕ್ಕೇ ಬಾಯಿ ಹಚ್ಚುತ್ತಿದ್ದವು. ಆಶ್ರಮವಾಸಿಗಳು ಹಸುಗಳನ್ನು ಹೆದರಿಸಿ ಓಡಿಸಿ ಬಿಡುತ್ತಿದ್ದರು. ಆದರೆ ಮಹಾವೀರರು ಹಾಗೆ ಮಾಡುವುದು ಸಾಧ್ಯವೇ? ಅವರು ಸದಾ ಧ್ಯಾನ ಮಗ್ನರಾಗಿರುವವರು. ಈ ತಲ್ಲೀನತೆ ಆಶ್ರಮದ ಕುಲಪತಿ (ಗುರು) ಗಳಿಗೂ ಸರಿಯೆನಿಸದೆ ಅವರೆಂದರು- "ಪಕ್ಷಿಗಳು ಕೂಡ ಸಂದರ್ಭ ಬಂದರೆ ತಮ್ಮ ಗೂಡಿನ ಸಂರಕ್ಷಣೆ ಮಾಡಿಕೊಳ್ಳುತ್ತವೆ. ನೀನು ಅಷ್ಟನ್ನೂ ಮಾಡಲಾರೆಯಾ?" ಮಹಾವೀರರು ಅಲ್ಲಿಂದ ಹೊರಟು ಬಿಟ್ಟರು. 'ತಾವು ಇರುವುದರಿಂದ ಇನ್ನೊಬ್ಬರಿಗೆ ತೊಂದರೆಯಾಗುವಂತಿದ್ದರೆ, ಅಲ್ಲಿ ತಾವಿರುವುದು ಉಚಿತವಲ್ಲ, ಎಲ್ಲಿದ್ದರೂ ಮೌನ-ಚಿಂತನದಲ್ಲಿ ಮನಸ್ಸು ಕೇಂದ್ರೀಕೃತಗೊಳ್ಳುವಂತಿರಬೇಕು' ಎಂದು ಅವರಿಗನಿಸಿತು. ಅವರು ಮುಂದೆ ನಡೆದು ಅಟ್ಟಿಯಾ ಗ್ರಾಮ ತಲುಪಿದರು. ಅಲ್ಲಿ ಅಸ್ಥಿಗಳ ರಾಶಿಯೇ ರಾಶಿ, ಅದಕ್ಕೇ ಅಟ್ಟಿಯಾಗ್ರಾಮ ಎಂಬ ಹೆಸರು. ಶೂಲಪಾಣಿಯಾದ ಯಕ್ಷನ ಕೈಚಳಕಕ್ಕೆ ಹೆಸರಾದ ಪ್ರದೇಶವದು. ಸರಿ, ಯಕ್ಷನು ಮಹಾವೀರರನ್ನೂ ಬಿಡಲಿಲ್ಲ. ಬೇಕಾದಷ್ಟು ಕಿರುಕಳ ನೀಡಿದ. ಮಹಾವೀರರು ಶಾಂತಚಿತ್ತದಿಂದಲೇ ಸಹಿಸಿಕೊಂಡರು. ಅದು ಚಾತುರ್ಮಾಸ ಕಾಲ- ಚಾತುರ್ಮಾಸದಲ್ಲಿ ಜೈನ ಸಾಧುಗಳು ಸಂಚಾರ ಕೈಕೊಳ್ಳಬಾರದೆಂದು ನಿಯಮ. ಮಹಾವೀರರಿಗಂತೂ ಇದೇ ಮೊದಲ ಚಾತುರ್ಮಾಸವಾಗಿತ್ತು.

ಅದಾದ ಬಳಿಕ ಮಹಾವೀರರು ಹಳ್ಳಿಯಿಂದ ಹಳ್ಳಿಗೆ ಸಂಚರಿಸುತ್ತ ರಾಜ ಗೃಹಕ್ಕೆ ಬಂದರು. ಅಲ್ಲಿಂದ ನಾಲಂದಾಕ್ಕೆ, ಅಲ್ಲಿ ಅವರಿಗೊಬ್ಬ ಸಂಗಾತಿ ದೊರೆತರು-ಮಂಖಲೀಪುತ್ರ ಗೋಶಾಲ, ವರ್ಷಾವಾಸ (ಮಳೆಗಾಲ)ಕ್ಕಾಗಿ ಅವರು ಅಲ್ಲಿ ತಂಗಿದ್ದರು ಇಬ್ಬರ ಭೇಟಿಯಾಯಿತು. ಪರಸ್ಪರ ಪರಿಚಯ ಬೆಳೆಯಿತು. ಮುಂದಿನ ಆರು ವರ್ಷಗಳುದ್ದಕ್ಕೂ ಅವರಿಬ್ಬರೂ ಕೂಡಿಯೇ ಇದ್ದರು. ಈ ದೀರ್ಘಾವಧಿಯಲ್ಲಿ ಅವರಿಬ್ಬರಲ್ಲಿಯೂ ಪರಸ್ಪರ ಪ್ರಭಾವ ವುಂಟಾಗಿರುವುದೂ ಸಹಜವೇ. ಎರಡನೆಯ ಚಾತುರ್ಮಾಸವನ್ನು ಅಲ್ಲಿಯೇ ಕಳೆದು, ಅವರಿಬ್ಬರೂ ಮೂರನೆಯ ಚಾತುರ್ಮಾಸವನ್ನು ಚಂಪಾದಲ್ಲಿ ಕಳೆದರು.

ಅಲ್ಲಿಂದ ಅವರು ಕುಮಾರಾಯ ಅಧಿಷ್ಠಾನಕ್ಕೆ ತೆರಳಿದರು. ಅಲ್ಲಿ ಪಾರ್ಶ್ವನಾಥರ

ಶಿಷ್ಯನಾದ ಸ್ಥವಿರ ಮುನಿಚಂದ್ರರು ತಮ್ಮ ಸಾಧು-ಸಂಘದೊಡನೆ ವಾಸವಾಗಿದ್ದರು. ಅವರು ಪರಿವಾರಸಮೇತ ಇದ್ದುದನ್ನು ಗಮನಿಸಿ ಗೋಶಾಲರು ಅವರೊಡನೆ ತತ್ವವಿವೇಚನೆ ನಡೆಸಿದರು. ಮುಂದೆ ಅವರು ಜೋರಾಗ ಪರಿಸರದೆಡೆಗೆ ಪಾದ ಬೆಳೆಸಿದರು. ಆಗಿನ ಕಾಲದಲ್ಲಿ ಶತ್ರುರಾಜ್ಯದ ಭಯವಿರುತ್ತಿತ್ತು. ಇವರಿಬ್ಬರೂ ಶತ್ರುಪಕ್ಷದ ಗೂಢಚಾರರಿರಬಹುದೆಂಬ ಅನುಮಾನದಿಂದ ರಾಜ್ಯದ ಕರ್ಮಚಾರಿಗಳು ಇವರನ್ನು ಕೆಲಕಾಲ ಸೆರೆಯಲ್ಲಿಟ್ಟು ಪೀಡಿಸಿದರು. ಎಲ್ಲಿದ್ದರೂ ಮಹಾವೀರರ ತಪಸ್ಸು ಅವಿರತವಾಗಿ ಸಾಗಿತ್ತು. ಇಬ್ಬರೂ ಸೇರಿ ತಮ್ಮ ನಾಲ್ಕನೆಯ ಚಾತುರ್ಮಾಸವನ್ನು ಪೃಷ್ಟಚಂಪಾದಲ್ಲಿ ಕಳೆದರು.

ಶ್ರಾವಸ್ತಿ ಮುಂತಾದ ಸ್ಥಳಗಳ ಸಂಚಾರ ಮುಗಿಸಿಕೊಂಡು ಇಬ್ಬರೂ ಕಲಂಬುಕ ಅಧಿಷ್ಠಾನಕ್ಕೆ ತಲುಪಿದರು. ಅಲ್ಲಿ ಇವರು ಕಳ್ಳರಿರಬಹುದೆಂಬ ಸಂದೇಹದಿಂದ ಬಂದಿಸಲ್ಪಟ್ಟರು. ಅಲ್ಲಿಂದ ಅವರು ಲಾಡ ದೇಶಕ್ಕೆ (ರಾಢ, ಪಶ್ಚಿಮ ಬಂಗಾಳ) ನಡೆದರು. ಒಂದೊಂದು ಕಡೆ ಒಂದೊಂದು ತೆರನಾದ ಸತ್ವಪರೀಕ್ಷೆ ನಡೆಯುತ್ತಿದ್ದರೂ, ಇನ್ನೂ ಮುಂದೆ ಮಹಾವೀರರ ನಿಜವಾದ ಪರೀಕ್ಷೆಯಾಗುವದಿತ್ತು. ಮಹಾವೀರರ ಸಂಚಾರ ಮುಂದುವರಿದಿತ್ತು. ಜನಕ್ಕಾಗಿ ನೀರಿಲ್ಲ, ನಿಲ್ಲಲು ನೆಲೆಯಿಲ್ಲ, ಹರದಾರಿ ಹರದಾರಿ ಯುದ್ಧಕೂ ಮಳಲ ಸೀಮೆ. ಜನವಸತಿಯೂ ವಿರಳ. ಇದ್ದಷ್ಟು ಜನರೂ ರುಕ್ಷ ಆಹಾರ ಸೇವನೆ ಮಾಡುವವರಾದ್ದರಿಂದ ಸ್ವಭಾವತಃ ಕೋಪಿಷ್ಠರು. ಸಾಧು-ಸಂತರನ್ನು ಕಂಡರಾಗದವರು. ನಗ್ನಶರೀರದಿಂದ ಸಂಚರಿಸುತ್ತಿದ್ದ ಮಹಾವೀರರನ್ನು ಕಂಡು ಅಲ್ಲಿಯ ಜನ ಅವರ ಮೈಮೇಲೆ ನಾಯಿಗಳನ್ನು ಛೂ ಬಿಟ್ಟರು; ಕಲ್ಲೆಸೆದರು; ಕೋಲುಗಳಿಂದಲೂ ಹೊಡೆದರು. ಮಕ್ಕಳಂತೂ ಅವರೆಡೆಗೆ ಮಣ್ಣು ತೂರಿ ಓಡಿ ಹೋಗುತ್ತಿದ್ದರು. ಒಂದೊಂದು ಗ್ರಾಮದ ನಿವಾಸಿಗಳಂತೂ ಮಹಾವೀರರ ಬೆನ್ನಟ್ಟಿ ಓಡಿಸಿ ಬಿಡುತ್ತಿದ್ದರು; ಅವರ ಮೈ-ಕೈಗಳನ್ನು ಪರಚಿ ಗಾಯಗೊಳಿಸುತ್ತಿದ್ದರು; ಅವರು ಯೋಗಾಸನ ಸ್ಥಿತಿಯಲ್ಲಿದ್ದಾಗ ಎಳೆದೆಳೆದು ಕೆಡಹುತ್ತಿದ್ದರು.[1] ಆದರೆ, ದೀರ್ಘ ತಪಸ್ವಿಗಳಾದ ಮಹಾವೀರರು ತನು-ಮನ-ವಚನಗಳಾದಿಯಾಗಿ ಯಾವ ಬಗೆಯಿಂದಲೂ ಇನ್ನೊಬ್ಬರಿಗೆ ಹಿಂಸೆಯಾಗದಂತೆ ದಕ್ಷತೆ ವಹಿಸುವ ದೀಕ್ಷೆ ತೊಟ್ಟಿದ್ದರು. ಅಂತೆಯೇ ಎಂಥ ಪೆಟ್ಟುಗಳಿಗೂ ಅಳುಕದೆ ಯುದ್ಧರಂಗದ ಅಗ್ರಭಾಗದಲ್ಲಿ ನಿಲ್ಲುವ ಆನೆಯಂತೆ ಮಹಾವೀರರು ಎನೆಲ್ಲ ಕಷ್ಟಗಳನ್ನು ಸಹಿಸಿಕೊಂಡು ತಮ್ಮ ಹೆಸರನ್ನು ಸಾರ್ಥಕಗೊಳಿಸಿದರು. ಈ ಮಹಾ ಆತ್ಮದಲ್ಲಿ ಎಷ್ಟೊಂದು ಸಹನಶಕ್ತಿಯಿರಬೇಕು? ಎಷ್ಟೊಂದು ಆತ್ಮವಿಶ್ವಾಸವಿರಬೇಕು! ಮುಂದೆ ಬುದ್ಧಿಯ (ಭಾದಿಯಾ, ಜಿಲ್ಲೆ-ಹಜಾರಿಬಾಗ) ತಲುಪಿ ಮಹಾವೀರ ಗೋಶಾಲರಿಬ್ಬರೂ ಐದನೆಯ ಚಾತುರ್ಮಾಸ ಕಳೆದರು.

ಕೂಪಿಯ ಅಧಿಷ್ಠಾನದಲ್ಲಿಯೂ ಇವರಿಬ್ಬರೂ ಗುಪ್ತಚಾರರೆಂಬ ಸಂದೇಹದ ಮೇಲೆ ಬಂಧಿಸಲ್ಪಟ್ಟರು. ಅಲ್ಲಿಂದ ಬಿಡುಗಡೆ ಹೊಂದಿ ವೈಶಾಲಿ ತಲುಪಿದರು. ಊರೂರು ಸಂಚರಿಸಿ ಮರಳಿ ಬುದ್ಧಿಯಕ್ಕೆ ಬಂದರು. ಮತ್ತೊಂದು ಚಾತುರ್ಮಾಸ ಕಳೆದರು.

ತಪಸ್ವೀ ಜೀವನದ ಈ ಆರು ವರ್ಷಗಳ ದಾರಿಯಲ್ಲಿ ಹಲವೊಂದು ಅಡ್ಡಿ-ಆತಂಕಗಳು ತುಂಬಿದ್ದವು. ಹಸಿವು-ನೀರಡಿಕೆ, ಚಳಿ-ಬಿಸಿಲು, ನೊರಜು-ಗುಂಗಾಡು, ಹಾವು-ಚೇಳು, ಹಿಂಸಾ

1. ದಿಗಂಬರ ಪರಂಪರೆಯಲ್ಲಿ ಮಹಾವೀರರನ್ನು ಉಪಸರ್ಗಾತೀತರೆಂದು ಭಾವಿಸಲಾಗಿದೆ.

ಪ್ರಾಣಿಗಳು, ಕಲ್ಲು-ಮುಳ್ಳುಗಳು, ತಗ್ಗು-ದಿನ್ನೆಗಳು, ಹೊಳೆ-ಹಳ್ಳಗಳು, ರಾಜ್ಯಾಧಿಕಾರಿಗಳ ಕಿರುಕಳ, ಮಾನಾಪಮಾನಾದಿಯಾಗಿ ಎಷ್ಟೊಂದು ಕಷ್ಟ-ಸಂಕಟಗಳನ್ನನುಭವಿಸಬೇಕಾಯ್ತು ಈ ಮಹಾ ತಪಸ್ವಿಗೆ! ಅದೆಲ್ಲವೂ ಅವರ ಭಾವೀ ಜೀವನದ ಸೂಕ್ತ ಸಿದ್ಧತೆಯೇ ಸರಿ.

ಹಾಗೆಯೇ ಇಬ್ಬರೂ ಹಳ್ಳಿ ಪಳ್ಳಿಗಳನ್ನು ಸಂದರ್ಶಿಸುತ್ತ ಲೋಹಗ್ಗಲಾ (ಲೋಹರಡಗ್ಗಾ, ಜಿಲ್ಲೆ-ರಾಂಚಿ) ತಲುಪಿದರು. ರಾಜಧಾನಿಯ ತುಂಬ ಗುಪ್ತಚಾರರ ಭಯವಿತ್ತು. ಅಂತೆಯೇ ಇಲ್ಲಿ ಇವರನ್ನು ಮತ್ತೆ ಬಂಧಿಸಲಾಯಿತು. ಅಲ್ಲಿಂದ ಬಿಡಿಸಿಕೊಂಡು ಪುರಿಮತಾಲ (ಪುರಲಿಯಾ, ಮಾನ ಭೂಮದ ಹತ್ತಿರ) ಮತ್ತು ಗೋಭೂಮಿ (ಗೋಮೋಹ, ಜಿಲ್ಲೆ-ಗಯಾ) ಸಂದರ್ಶಿಸಿ ರಾಜಗೃಹ ಸೇರಿದರು. ಅಲ್ಲಿ ಅವರ ಎಂಟನೆಯ ಚಾತುರ್ಮಾಸ ಕಳೆಯಿತು. ಅಲ್ಲಿಂದ ಗೋಶಾಲರೊಡಗೂಡಿ ಮತ್ತೆ ಲಾಢ ಪ್ರದೇಶದ ಸಂಚಾರಕ್ಕೆ ಹೊರಟರು. ಮತ್ತೆ ಅದೇ ತರದ ಅವಮಾನ, ಅವೇ ಬೈಗಳು, ಕಿರುಕಳ, ಶಾರೀರಿಕ ಯಾತನೆಗಳು! ಆದರೀಗ ಇವರಿಗೆ ಈ ಕಷ್ಟಗಳನ್ನೆಲ್ಲ ಸಹಿಸಿಕೊಳ್ಳುವ ಅಭ್ಯಾಸವಾಗಿತ್ತು. ಶರೀರದ ಬಗ್ಗೆ ಯಾವ ಮೋಹ-ಮಮತೆಗಳೇ ಉಳಿದಿರದಿದ್ದರೆ ಅದಕ್ಕೆಲ್ಲಿಯ ಕಷ್ಟ, ಎಲ್ಲಿಯ ಸಂಕಟ!

ಲಾಢ ಪ್ರದೇಶದಿಂದ ಹೊರಟು ಇಬ್ಬರೂ ಸಿದ್ಧತ್ತಪುರ ಸೇರಿದರು. ಅಲ್ಲಿ ವೈಶ್ಯಾಯನೆಂಬ ಬಾಲತಪಸ್ವಿಗೂ ಗೋಶಾಲರಿಗೂ ವಾಗ್ವಾದ ನಡೆಯಿತು. ಆತನು ಕೋಪದಿಂದ ಗೋಶಾಲರ ಮೇಲೆ ತೇಜೋತೀಶ್ಯಾ ಪ್ರಯೋಗ .ಮಾಡಿದ-ಮಹಾವೀರರು ಗೋಶಾಲರಿಗೆ ಸಂರಕ್ಷಣೆ ನೀಡಿದರು. ಮಹಾವೀರರು ಪ್ರತಿಪಾದಿಸಿದ ತೇಜೋತೀಶ್ಯಾ ಸಿದ್ಧಪಡಿಸಲು ಗೋಶಾಲರು ಶ್ರಾವಸ್ತಿಗೆ ಹೊರಟರು. ಮಹಾವೀರರು ವೈಶಾಲಿಯತ್ತ ಪಾದ ಬೆಳೆಸಿದರು. ಅಲ್ಲಿಂದ ದೋಣಿಯಲ್ಲಿ ಕುಳಿತು ಗಂಡಕ ನದಿಯನ್ನು ದಾಟಿ ವಾಣಿಜ್ಯ ಗ್ರಾಮ ತಲುಪುವುದಿತ್ತು. ಅಂತೂ ಒಮ್ಮೆ ವಾಣಿಜ್ಯ ಗ್ರಾಮ ತಲುಪಿ, ಅಲ್ಲಿಂದ ಶ್ರಾವಸ್ತಿಗೆ ಹೋಗಿ, ಹತ್ತನೆಯ ಚಾತುರ್ಮಾಸ ಕಳೆದರು.

ಹೀಗೆಯೇ ಸಂಚಾರ ಮುಂದುವರಿಸಿ ದಢಭೂಮಿ (ಧಾಲಭೂಮ, ಜಿಲ್ಲೆ-ಸಿಂಹಭೂಮ) ತಲುಪಿದರು. ಈ ಪ್ರದೇಶವೂ ಕಾಡು ಜನರಿಂದ ತುಂಬಿತ್ತು. ಇಲ್ಲಿಯೂ, ಸುತ್ತ-ಮುತ್ತಲಿನ ಪ್ರದೇಶದಲ್ಲಿಯೂ ಮಹಾವೀರರು ಅನೇಕ ಕಷ್ಟ-ಸಂಕಟಗಳನ್ನ ನುಭವಿಸಬೇಕಾಯಿತು. ಆದರೂ ಈ ಭಾಗದಲ್ಲಿ ಆರು ತಿಂಗಳ ವರೆಗೆ ಅವರ ಸಂಚಾರ ನಡೆಯಿತು. ತೋಸಲಿ (ಧೌಲಿ, ಜಿಲ್ಲೆ-ಕಟಕ) ಸೇರುತ್ತಲೇ ಇವರು ಕಳ್ಳರೆಂಬ ಸಂದೇಹವುಂಟಾಗಿ ಇವರನ್ನು ಬಂಧಿಸಿದರು. ಅಷ್ಟೇ ಅಲ್ಲ, ಇವರನ್ನು ಗಲ್ಲಗೇರಿಸುವ ಸನ್ನಾಹವೂ ನಡೆಯಿತು. ಅಲ್ಲಿಂದ ಪಾರುಗೊಂಡು ಈ ದೀರ್ಘ ತಪಸ್ವಿಗಳು ಆಲಭಿಯೂ, ಶ್ರಾವಸ್ತಿ ಕೌಶಾಂಬಿ, ವಾರಣಾಸಿ, ರಾಜಗೃಹ ಮತ್ತು ಮಿಥಿಲಾನಗರಿಗಳನ್ನು ಸಂದರ್ಶಿಸುತ್ತ ವೈಶಾಲಿಗೆ ಬಂದು ತಲುಪಿದರು. ಈ ಸಲ ಇಲ್ಲಿ ಇವರ ಹನ್ನೊಂದನೆಯ ಚಾತುರ್ಮಾಸ ಕಳೆಯಿತು.

ಹನ್ನೆರಡು ವರ್ಷಗಳ ತಪಃಸಾಧನೆಯೆಂದರೆ ಕಡಿಮೆಯೇನಲ್ಲ. ಎಂಥೆಂಥ ಪರಾಕ್ರಮಿಗಳ ಧೈರ್ಯಗೆಡುವುದುಂಟು, ಮನಸ್ಸು ವಿಚಲಿತಗೊಳ್ಳುವುದುಂಟು, ಕಳೆದ ದಿನಗಳ ಭೋಗ-ವಿಲಾಸದ ಸ್ಮರಣೆ ಸುರುಳಿ ಬಿಚ್ಚುವುದುಂಟು. ಮಹಾವೀರರು ಮಾತ್ರ ಮಾನವರಾಗಿದ್ದೂ ಅತಿಮಾನವ ಪದ ತಲುಪಿದ್ದರು. ಶರೀರಧಾರಣೆಗೆ ಎಷ್ಟು ಅಗತ್ಯವೋ ಅಷ್ಟೇ ಸಾದಾ

ಆಹಾರವನ್ನು ಅವರು ಸೇವಿಸುತ್ತಿದ್ದರು. ಹೆಚ್ಚಾಗಿ ನಿರಾಹಾರ ದಿನಗಳನ್ನೇ ಕಳೆಯುತ್ತಿದ್ದರು. ನೀರು ಕೂಡ ಕುಡಿಯುತ್ತಿರಲಿಲ್ಲ. ಅವರಿಗಾಗಿಯೇ ಎಂದು ಯಾರಾದರೂ ಆಹಾರ ತಯಾರಿಸಿ ತಂದರೆ ಅವರದನ್ನು ಸ್ವೀಕರಿಸುತ್ತಿರಲಿಲ್ಲ. ಭಿಕ್ಷೆಗೆ ಹೊರಟ ಮಾರ್ಗದಲ್ಲಿ ಶ್ರಮಣ, ಬ್ರಾಹ್ಮಣ, ಭಿಕ್ಷುಕ, ಅತಿಥಿ, ಚಾಂಡಾಲ, ಬೆಕ್ಕು, ನಾಯಿ ಹಾಗೂ ಹಸಿವು-ನೀರಡಿಕೆಗಳಿಂದ ಬಳಲುವ ಪಶುಪಕ್ಷಿಗಳನ್ನು ಕಂಡರೆ ಅವರ ಹೃದಯ ಕರುಣೆಯಿಂದ ತಳಮಳಿಸಿದಂತಾಗಿ ಅವರು ಅಲ್ಲಿಂದ ಬೇರೆಡೆಗೆ ಹೊರಟು ಬಿಡುತ್ತಿದ್ದರು. ಆಹಾರ-ನೀರುಗಳ ಕಡೆಗಂತೂ ಅವರ ಗಮನವೇ ಇರಲಿಲ್ಲ. ಹಸಿ-ಬಿಸಿಯೆನ್ನದೆ, ತಂಗಳನ್ನ-ಆರಿದನ್ನ ಎನ್ನದೆ ಕೊಂಚ ಆಹಾರ ಸೇವಿಸುತ್ತಿದ್ದರು. ಅದು ಸಿಕ್ಕರೂ ಸರಿ, ಸಿಗದಿದ್ದರೂ ಸರಿ. ಅನ್ನ-ನೀರು ಸಿಗದಿದ್ದರೂ ಅವರು ಶಾಂತಭಾವದಿಂದಿರುತ್ತಿದ್ದರು. ಅವರು ತಮ್ಮ ಶರೀರದ ಮೇಲೆ ಅದ್ಭುತ ನಿಯಂತ್ರಣ ಸಾಧಿಸಿಕೊಂಡಿದ್ದರು. ತಪ್ಪಿ ನಿದ್ದೆಯ ಮಂಪರು ಬಂದರೂ ಕೂಡಲೇ ಎದ್ದು ಕುಳಿತು ಧ್ಯಾನ ಮಗ್ನ ರಾಗುತ್ತಿದ್ದರು. ಕಾಹಿಲೆಯಾದರೆ ಉಪಚಾರದ ಯೋಚನೆ ಮಾಡುತ್ತಿರಲಿಲ್ಲ. ಮಲ-ಮೂತ್ರ, ವಾಂತಿ-ವಾಕರಿಕೆಗಳ ಕಡೆಗೂ ಅವರ ಗಮನವಿರುತ್ತಿರಲಿಲ್ಲ. ಮೈಕೊರೆಯುವ ಚಳಿಗಾಳಿ ಬೀಸಲಾರಂಭಿಸಿದರೆ ಸಾಮಾನ್ಯ ಜನರು ಗಡಗಡನೆ ನಡುಗುವುದುಂಟು; ಸಾಧು-ಸಂತರು ಕೂಡ ಬೆಚ್ಚನೆಯ ಗುಹಾಸ್ಥಾನಗಳನ್ನು ಹುಡುಕಿಕೊಳ್ಳುವುದುಂಟು; ಅಗ್ನಿ ಕುಂಡಗಳನ್ನು ಹೊತ್ತಿಸಿ ಅಥವಾ ಮೈತುಂಬ ಬಟ್ಟೆ ಹೊದ್ದುಕೊಂಡು ಬೆಚ್ಚಗಿರುವ ಪ್ರಯತ್ನ ಮಾಡುವುದೂ ಉಂಟು. ಆದರೆ, ದೀರ್ಘ ತಪಸ್ವಿಗಳೂ, ಶ್ರಮಣ ಶ್ರೇಷ್ಠರೂ ಆದ ಮಹಾವೀರರು ಮಾತ್ರ ಎಂಥ ಚಳಿಗಾಳಿಗೂ ಅಳುಕದೆ ದೃಢಚಿತ್ತದಿಂದ ಧ್ಯಾನ-ಮಗ್ನರಾಗಿ ಕುಳಿತುಕೊಂಡಿರುತ್ತಿದ್ದರು. ಋತುಗಳು ಬದಲಾದರೂ ಮಹಾವೀರರ ತಪೋನಿಷ್ಠೆ ಬದಲಾಗಲಿಲ್ಲ.

ಕರ್ಮಕ್ಕೆ ತಕ್ಕ ಫಲ ಕಟ್ಟಿಟ್ಟದ್ದು. ನಿಜವಾದ ಸಿದ್ಧಿಯೆಂಬುದು ಪುರುಷಾರ್ಥದಲ್ಲಿರುತ್ತದೆ. ನಮ್ಮ ಚರಿತ್ರೆಯ ನಾಯಕರಿಗೆ ಜಂಭಿಯಾ ಗ್ರಾಮ ತಲುಪಿದ್ದಾಗಿದೆ. ವೈಶಾಲಿ ಮಾಸದ ಹತ್ತನೆಯ ಪವಿತ್ರ ದಿನ, ಋಜುವಾಲಿಕಾ ನದೀ ತಟದಲ್ಲಿ ಒಂದು ಹೊಲದಲ್ಲಿರುವ ವಿಶಾಲವಾದ ವೃಕ್ಷ ದಡಿಯಲ್ಲಿ ಗೋದೋಹನದಾಸನದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದಾರೆ. ಒಮ್ಮಿಂದೊಮ್ಮೆ ಕರ್ಮಬಂಧನಗಳೆಲ್ಲ ಹರಿದುಹೋದಂತೆ, ಮನದ ಗ್ರಂಥಿಗಳೆಲ್ಲ ಅರಳಿದಂತೆ, ಸಂದೇಹಗಳ ಅಂಧಕಾರ ಕರಗಿಹೋದಂತೆ, ನಾಲ್ದೆಸೆಗಳಲ್ಲೂ ಜ್ಞಾನಪ್ರಕಾಶವೇ ಪಸರಿಸಿದಂತೆ ಅವರಿಗೆ ಪ್ರತೀತಿಯಾಗುತ್ತದೆ. ಈವರೆಗೆ ಹತ್ತಿರವಿಲ್ಲದ್ದು ಈಗ ಹತ್ತಿರವಾಗಿ ತನ್ನದೆನಿಸುತ್ತದೆ; ಅಪರಿಚಿತವಾಗಿದ್ದುದು ನಿಕಟ ಪರಿಚಯವಾಗಿ ಅದರ ಪರಿಪೂರ್ಣಜ್ಞಾನವುಂಟಾಗುತ್ತದೆ. ಯಾವುದು ಅದೃಶ್ಯವಾಗಿ ಉಳಿದಿತ್ತೋ ಅದು ದೃಷ್ಟಿವಲಯದಲ್ಲಿ ಬರುತ್ತದೆ. ಯಾವುದರ ಧ್ವನಿಯೇ ಈ ವರೆಗೆ ಕೇಳಿಸುತ್ತಿರಲಿಲ್ಲವೋ ಅದರ ಅಪರಿಮಿತ ನಿನಾದವೇ ಈಗ ಕೇಳಿಬರುತ್ತದೆ. ಹೀಗೆ ದೀರ್ಘ ತಪಸ್ವಿಯ ಮನೋಭಿಲಾಷೆ ಈಡೇರಿದಂತಾಯಿತು; ಜ್ಞಾನಚಕ್ಷು ತೆರೆಯಿತು. ಅವರು ಜ್ಞಾನೋದಯದ ಚರಮಾವಸ್ಥೆ ತಲುಪಿದ್ದರೂ ಅವರಿನ್ನು ಖಂಡಿತವಾಗಿಯೂ ಲೋಕಕಲ್ಯಾಣ ಗೈಯಬಲ್ಲರೆಂಬ ಭರವಸೆ ಅವರ ಮನಸ್ಸಿನಲ್ಲಿ ಮೂಡಿಕೊಂಡಿತು.[1]

1. ನೋಡಿ : ಆಚಾರಾಂಗ (6); ಕಲ್ಪಸೂತ್ರ (5 112-120); ಆವಶ್ಯಕ ನಿರ್ಯುಕ್ತಿ (111-527); ಆವಶ್ಯಕ ಚೂರ್ಣಿ (268-323); ಜಿನಸೇನ ಹರಿವಂಶ ಪುರಾಣ, ಗುಣಭದ್ರ, ಉತ್ತರಪುರಾಣ.

## ಮಹಾವೀರರ ಶಿಷ್ಯವೃಂದ

ಮಹಾವೀರರಿಗೆ ಕೇವಲ ಜ್ಞಾನಪ್ರಾಪ್ತವಾದ ವಾರ್ತೆ ಮಿಂಚಿನಂತೆ ಹತ್ತೂ ಕಡೆಗೆ ಹರಡಿತು. ಅವರಿಗೆ ತೀರ್ಥಂಕರ, ವೀತರಾಗ, ಬುದ್ಧ, ಭಗವಾನ, ಅರ್ಹಂತ, ಜಿನ, ಕೇವಲಿ, ಸರ್ವಜ್ಞ, ಸರ್ವದರ್ಶಿ ಮುಂತಾದ ಕಾಮಾಭಿದಾನಗಳು ಪ್ರಾಪ್ತವಾದವು. ರಾಗ, ದ್ವೇಷ, ಕ್ರೋಧ, ಮದ, ಮೋಹ ಮತ್ತು ಲೋಭಗಳ ಮೇಲೆ ಅವರು ವಿಜಯ ಸಾಧಿಸಿದ್ದರು.

ಭಗವಾನರು ಜಂಭಿಯ ಗ್ರಾಮದಿಂದ ಮಜ್ಝಿಮ ಪಾವಾ (ಮಧ್ಯಮ) ಪಾವಾ, ಪಾವಾ ಅಥವಾ ಅಪಾಪಾ; ಪಾವನಗರ ಜಿಲ್ಲೆ-ದೇವರಿಯಾ) ತಲುಪಿದರು ಮತ್ತು ಅಲ್ಲಿಯ ಮಹಾಸೇನ ಉದ್ಯಾನವನದಲ್ಲಿ ನೆಲೆನಿಂತರು.[1] ಆ ಸಂದರ್ಭದಲ್ಲಿಯೇ ಸೋಮಿಲನೆಂಬ ಧನಾಢ್ಯ ಬ್ರಾಹ್ಮಣರೊಬ್ಬರು ಮಹಾಯಜ್ಞವನ್ನೇರ್ಪಡಿಸಿದ್ದರು. ಅದರಲ್ಲಿ ತಮ್ಮ ತಮ್ಮ ಶಿಷ್ಯಸಮೂಹದೊಡನೆ ಮಗಧರ ನೂರಾರು ಬ್ರಾಹ್ಮಣ ಪಂಡಿತರು ಭಾಗವಹಿಸಿದ್ದರು. ಮಧ್ಯಮ ಪಾವಾಪುರಿಯಲ್ಲಿ ಭಾರೀ ಸಡಗರ ನಡೆದಿತ್ತು. ಇಂದ್ರಭೂತಿ, ಅಗ್ನಿಭೂತಿ, ವಾಯುಭೂತಿ, ವ್ಯಕ್ತ, ಸುಧರ್ಮಾ, ಮಂಡಿತ, ಮೌರ್ಯಪುತ್ರ, ಅಕಂಪಿತ, ಅಚಲಭ್ರಾತಾ, ಮೇತಾರ್ಯ ಮತ್ತು ಪ್ರಭಾಸ-ಮುಂತಾದ ಪ್ರಮುಖ ವಿದ್ವಾಂಸರೂ ಉಪಸ್ಥಿತರಿದ್ದರು. ಇಂದ್ರಭೂತಿ, ಅಗ್ನಿಭೂತಿ ಮತ್ತು ವಾಯುಭೂತಿ-ಈ ಮೂವರೂ ಬಂಧುಗಳು ಗೌತಮ ಗೋತ್ರದವರಾಗಿದ್ದು ಗೋಬ್ಬರಗ್ರಾಮ ನಿವಾಸಿಗಳಾಗಿದ್ದರು. ವ್ಯಕ್ತ ಮತ್ತು ಸುಧರ್ಮಾ ಇವರಿಬ್ಬರೂ ಕೋಲ್ಲಾಗ ಪರಿಸರಕ್ಕೆ ಸಂಬಂಧಿಸಿದವರು. ವ್ಯಕ್ತ ಭಾರದ್ವಾಜ ಗೋತ್ರದವರೂ, ಸುಧರ್ಮಾ ಅಗ್ನಿ ವೈಶ್ಯಾಯನ ಗೋತ್ರದವರೂ ಆಗಿದ್ದರು. ಮಂಡಿತರು ವಶಿಷ್ಠ ಗೋತ್ರಕ್ಕೂ ಮೌರ್ಯಪುತ್ರರು ಕಶ್ಯಪ ಗೋತ್ರಕ್ಕೂ ಸಂಬಂಧಿಸಿದವರು. ಅಕಂಪಿತ ಮಿಥಿಲಾನಗರಿಯವರು; ಗೌತಮ ಗೋತ್ರಕ್ಕೆ ಸಂಬಂಧಿಸಿದವರು. ಅಚಲಭ್ರಾತಾ ಕೋಶಲದವರು ಹರಿತ ಗೋತ್ರದವರು. ಮೇತಾರ್ಯ ತುಂಗಿಕದವರು ಮತ್ತು ಪ್ರಭಾಸ ರಾಜಗೃಹದವರಾಗಿದ್ದರು. ಈ ವಿದ್ವಾಂಸರಲ್ಲದೆ, ಇನ್ನಿತರ ಅನೇಕ ಪ್ರಖ್ಯಾತ ಪಂಡಿತರು ಮಹಾವೀರರ ಕೀರ್ತಿಯನ್ನು ಕೇಳಿ ತಮ್ಮ ತಮ್ಮ ಅನುಮಾಗಳ ಬಗೆಗೆ ಚರ್ಚಿಸಿ ಪರಿಹಾರ ಪಡೆಯಲೆಂದು ಅಲ್ಲಿಗೆ ಬಂದಿದ್ದರು. ತೀರ್ಥಂಕರರ ದರ್ಶನಕ್ಕಾಗಿ ಜನ ಸಮುದ್ರವೇ ಸೇರಿತ್ತು. ಸ್ವರ್ಗದಿಂದ ಓರ್ವ ದೇವತೆಯೇ ಧರೆಗಿಳಿದು ಬಂದಂಥ ಪವಿತ್ರ ವಾತಾವರಣ ಅಲ್ಲಿ ಪಸರಿಸಿತ್ತು.

ಹದಿನಾಲ್ಕು ವಿದ್ಯೆಗಳಲ್ಲೂ ಪಾರಂಗತರಾದ ಇಂದ್ರಭೂತಿ ಮುಂತಾದ ಬ್ರಾಹ್ಮಣ ವಿದ್ವಾಂಸರು ತಮ್ಮ ತಮ್ಮ ವಿಷಯಗಳಲ್ಲಿ ಪ್ರಗಲ್ಭ ಪಂಡಿತರೇ ಆಗಿದ್ದರು. ತಮ್ಮ ತಮ್ಮ ಅನುಮಾನಗಳೊಂದಿಗೆ ಅವರೆಲ್ಲ ಮಹಾವೀರರು ವಿರಾಜಮಾನರಾಗಿ ಕುಳಿತ್ತಿದ್ದ ಮಹಾಸೇನ ಉದ್ಯಾನವನಕ್ಕೆ ಬಂದು ಸೇರಿದರು. ಇಂದ್ರಭೂತಿಗೆ ಆತ್ಮದ ವಿಷಯದಲ್ಲಿ ಅನುಮಾನವಿದ್ದಿತು. ಅಗ್ನಿಭೂತಿಯ ಅನುಮಾನ ಕರ್ಮವನ್ನು ಕುರಿತಾದುದು. ವಾಯುಭೂತಿಯ ದೃಷ್ಟಿಯಲ್ಲಿ ಜೀವ

---

1. ದಿಗಂಬರ ಪರಂಪರೆಯ ಪ್ರಕಾರ ಮಹಾವೀರರ ಪ್ರಥಮ ಉಪದೇಶವು ರಾಜಗೃಹದ ವಿಪುಲಾಚಲ ಪರ್ವತದ ಮೇಲೆ ನಡೆಯಿತು.

ಮತ್ತು ಶರೀರವೆಂದರೆ ಒಂದೇ ಎಂಬ ಲೆಕ್ಕ. ಇನ್ನೊಬ್ಬರ ಪ್ರಶ್ನೆ : ಕಣ್ಣಿಗೆ ಕಾಣಿಸುವುದೆಲ್ಲ ಸತ್ಯವೇ, ಅಥವಾ ಸ್ವಪ್ನದಂಥ ಭ್ರಮೆಯೇ? ಈ ಜನ್ಮದಲ್ಲಿ ಯಾವ ಯೋನಿಯಿಂದೊಂದು ಜೀವ ಹುಟ್ಟಿ ಬಂದಿರುತ್ತದೋ, ಪುನರ್ಜನ್ಮದಲ್ಲಿಯೂ ಆ ಜೀವ ಅದೇ ಯೋನಿಯಲ್ಲಿ ಬರುತ್ತದೆಂದು ಸುಧರ್ಮಾ ಅವರ ತಿಳುವಳಿಕೆ. ಕರ್ಮಬಂಧನ ಮತ್ತು ಮೋಕ್ಷದ ವಾಸ್ತವಿಕತೆಯ ಬಗ್ಗೆ ಮಂಡಿತರ ಮನಸ್ಸಿನಲ್ಲಿ ಸಂದೇಹ. ಮೌರ್ಯ ಪುತ್ರರಿಗೆ ಸ್ವರ್ಗದ ಯೋಚನೆ, ಅಕಂಪಿತರಿಗೆ ನರಕದ ಚಿಂತೆ, ಅಚಲಭ್ರಾತಾರಿಗೆ ಪುಣ್ಯ-ಪಾಪಗಳ ಆಲೋಚನೆ, ಮೇತಾರ್ಯರಿಗೆ ಪರಲೋಕದ ವಿಚಾರ, ಪ್ರಭಾಸರಿಗೆ ನಿರ್ವಾಣದ ಬಗ್ಗೆ ಸಂಶಯ.

ಈ ಎಲ್ಲ ವಿದ್ವಾಂಸರು ಭಗವಾನ ಮಹಾವೀರರೊಡನೆ ಬಹುಕಾಲ ಚರ್ಚಿಸಿದರು; ವಾದ-ವಿವಾದಗಳಾದವು; ಪ್ರಶ್ನೋತ್ತರಗಳು ನಡೆದವು. ಮಹಾವೀರರು ತಮ್ಮ ಶಾಂತ ಮತ್ತು ಗಂಭೀರ ಅನುಪಮ ಶೈಲಿಯಲ್ಲಿ ಸಕಲರ ಸಂದೇಹಗಳಿಗೂ ಉತ್ತರ ನೀಡಿದರು. ಅವರ ಒಂದೊಂದೇ ಉತ್ತರ ಕೇಳಿ, ಶಾಂತ ಮತ್ತು ಪ್ರಸನ್ನ ಮುಖಮುದ್ರೆಯನ್ನುಯನ್ನು ನೋಡಿ ಎಲ್ಲರ ಮೇಲೆಯೂ ಅದ್ಭುತ ಪರಿಣಾಮವುಂಟಾಯಿತು. ಹೀಗೆ ಅವರು ಒಂದಾದ ಮೇಲೊಂದರಂತೆ ಎಲ್ಲ ಶಂಕೆಗಳ ಪರಿಹಾರ ಸೂಚಿಸಿದುದನ್ನು ಗಮನಿಸಿ ಈ ಹನ್ನೊಂದೂ ಬ್ರಾಹ್ಮಣ ವಿದ್ವಾಂಸರು ಮಹಾವೀರರ ಶಿಷ್ಯತ್ವ ಅಂಗೀಕರಿಸುವ ಅಭಿಲಾಷೆ ವ್ಯಕ್ತಗೊಳಿಸಿದರು. ಗುರುಪದರ ಮೇಲಿದ್ದ ಇಂಥ ವಿದ್ವಾಂಸರು ಮಹಾವೀರರ ಶಿಷ್ಯತ್ವ ಸ್ವೀಕರಿದ್ದೊಂದು ಸೋಜಿಗದ ಸಂಗತಿಯೇಸರಿ. ಭಗವಾನ ಮಹಾವೀರರು ಅವರೆಲ್ಲರಿಗೂ ಶ್ರಾಮಣ್ಯದೀಕ್ಷೆ ನೀಡಿ ತಮ್ಮ ಪಟ್ಟಧರರೆಂದು ಸಾರಿದರು. ಈ ಹನ್ನೊಂದೂ ವಿದ್ವಾಂಸರು ಮಹಾವೀರರ ಗಣಧರರೆನಿಸಿ ಕೊಂಡರು. ಹನ್ನೆರಡು ಅಂಗ, ಹದಿನಾಲ್ಕು ಪೂರ್ವ ಮತ್ತು ಸಮಸ್ತ ಶ್ರುತದ ಆಳವಾದ ಅಧ್ಯಯನ ಮತ್ತು ಮನನ ಮಾಡಿ, ಭಗವಾನ ಮಹಾವೀರರ ಸಾರ್ವಜನಿಕ ಹಿತೋಪದೇಶಗಳನ್ನು ದೂರದೂರದ ವರೆಗೂ ಪ್ರಚಾರ ಮತ್ತು ಪ್ರಸಾರ ಮಾಡುವುದರಲ್ಲಿ ನಿರತರಾದರು.[1]

## ಇ) ಕೇವಲಾವಸ್ಥೆ ಮತ್ತು ನಿರ್ವಾಣ ಪ್ರಾಪ್ತಿ

ಕೇವಲ ಜ್ಞಾನವುಂಟಾದ ತರುವಾಯ ಭಗವಾನ ಮಹಾವೀರರು ತಮ್ಮ ಧರ್ಮೋಪದೇಶದ ಮೂಲಕ ಜನಕಲ್ಯಾಣ ಸಾಧಿಸುವ ಮಹತ್ಕಾರ್ಯಕ್ಕೆ ತೊಡಗಿದರು. ಅವರ ಪ್ರಥಮ ಉಪದೇಶದ ಹೊತ್ತಿಗೆಂದರೆ ಚತುರ್ವಿಧ ಸಂಘದ ಸ್ಥಾಪನೆಯೂ ಆಗಿತ್ತು. ಸಾಧು-ಸಾಧ್ವಿಯರು ಆಚಾರ್ಯರ ಅಥವಾ ಗಣಿನೀಯರ ನೇತೃತ್ವದಲ್ಲಿರುವುದು, ಶ್ರಾವಕಗಣಗಳು ಭಿಕ್ಷೆ ಇತ್ಯಾದಿ ನೀಡಿ ಸಾಧು-ಸಾಧ್ವಿಯರನ್ನು ನೋಡಿಕೊಳ್ಳುವುದು, ಅವರ ಧರ್ಮೋಪದೇಶ ಕೇಳಿ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳುವುದು; ಈ ತರದ ಪರಸ್ಪರ ಸಹಯೋಗವೇ ಈ ಸಂಘ-ಸ್ಥಾಪನೆಯ ಉದ್ದೇಶವಾಗಿತ್ತು.

---

1. ನೋಡಿ : ಕಲ್ಪಸೂತ್ರ (8, 1-4; 5, 127); ಆವಶ್ಯಕ ನಿರ್ಯುಕ್ತಿ (644, 656 ಇತ್ಯಾದಿ); ಆವಶ್ಯಕಚೂರ್ಣಿ (334 ಇತ್ಯಾದಿ); ಜಿನಸೇನ, ಹರಿವಂಶ ಪುರಾಣ.

## ರಾಜಗೃಹದಲ್ಲಿ ಮೇಘಕುಮಾರ ದೀಕ್ಷೆ

ಮಧ್ಯಮಪಾವಾದಲ್ಲಿ ತಂಗಿರುವಾಗ ಕೇವಲಾವಸ್ಥೆಯನ್ನು ತಲುಪಿದ ಭಗವಾನ ಮಹಾವೀರರು ಊರಿಂದೂರಿಗೆ ಸಂಚರಿಸುತ್ತ ರಾಜಗೃಹಕ್ಕೆ ಬಂದು ತಲುಪಿದರು. ಅಲ್ಲಿ ಗುಣಶೀಲ ಚೈತ್ಯದಲ್ಲಿ ನಿಂತರು. ಅವರ ಶುಭಾಗಮನದ ಸಮಾಚಾರ ಹಬ್ಬಿದೊಡನೆ ಹಾದಿ-ಬೀದಿಗಳಲ್ಲಿ, ರಸ್ತೆ-ಚೌಕಗಳಲ್ಲಿ, ಓಣಿ-ಓಣಿಯಲ್ಲಿ ಜನಜಾತ್ರೆ ಸೇರಿತು. ಹಾಗೆಯೇ, ಉಗ್ರ, ಉಗ್ರಪುತ್ರರು, ಭೋಗ, ಭೋಗಪುತ್ರರು, ರಾಜವಂಶದವರು, ಕ್ಷತ್ರಿಯರು, ಬ್ರಾಹ್ಮಣರು, ಭಟರು, ಯೋಧರು, ಧರ್ಮಶಾಸ್ತ್ರಜ್ಞರು, ಮಲ್ಲಕಿ, ಲಿಚ್ಛವಿ, ಮಾಂಡಲಿಕ, ಯುವರಾಜರು, ಗೃಹಸ್ಥರು, ಧನಿಕರು, ಶೆಟ್ಟಿಗಳು, ಸೇನಾಪತಿಗಳು-ಹೀಗೆ ಹಲವೊಂದು ಬಗೆಯ ಜನ ಗುಂಪು-ಗುಂಪಾಗಿ ಮಹಾವೀರರ ದರ್ಶನಕ್ಕಾಗಿ ಧಾವಿಸಿದರು.

ಆ ಕಾಲದಲ್ಲಿ ಮಗಧದಲ್ಲಿ ಶ್ರೇಣಿಕ ಬಿಂಬಸಾರನೆಂಬ ಶೂರ ದೊರೆ ರಾಜ್ಯವಾಳುತ್ತಿದ್ದನು. ಅವನ ರಾಣಿಯ ಹೆಸರು ಧಾರಿಣಿ, ಬಿಂಬಸಾರ-ಧಾರಿಣಿಯರ ಉದರದಲ್ಲಿ ಜನಿಸಿಬಂದು ಬೆಳೆಯುತ್ತಿದ್ದ ರಾಜಕುಮಾರ ಮೇಘ ಕುಮಾರನು ಈ ಕೋಲಾಹಲದ ಸಮಾಚಾರ ಕೇಳಿದೊಡನೆ ತನ್ನ ಕಂಚುಕಿಯನ್ನು ಕರೆಯಿಸಿ ವಿಚಾರಿಸಿದ. ಆಗ ಆ ದ್ವಾರಪಾಲಕನೆಂದ : "ಹೇ, ದೇವಾನುಪ್ರಿಯ! ಶ್ರಮಣ ಭಗವಾನ ತೀರ್ಥಂಕರ ಮಹಾವೀರರು ನಮ್ಮ ನಗರದಲ್ಲಿ ಚಿತ್ತೈಸಿದ್ದಾರೆ. ಅವರ ದರ್ಶನಕ್ಕಾಗಿ ನಾ ಮುಂದೆ ನೀ ಮುಂದೆ ಎಂದು ನಗರ ವಾಸಿಗಳೆಲ್ಲ ಧಾವಿಸುತ್ತಿರುವ ಸದ್ದು ಇದು!" ಈ ವಿಷಯ ತಿಳಿದೊಡನೆ ರಾಜಕುಮಾರನು ತನ್ನ ರಥ ಅಣಿಗೊಳಿಸಲು ಅಪ್ಪಣೆಯಿತ್ತನು; ಸ್ನಾನಮಾಡಿ ಶುಚಿರ್ಭೂತಗೊಂಡನು. ಸರ್ವಾಲಂಕಾರ ಸಂಪನ್ನನಾಗಿ ಭಗವಾನರ ದರ್ಶನಕ್ಕಾಗಿ ರಥವೇರಿ ಹೊರಟನು.

ಭಗವಾನರನ್ನು ದೂರದಿಂದ ನೋಡುತ್ತಲೇ, ಮೇಘಕುಮಾರನು ರಥದಿಂದ ಕೆಳಗಿಳಿದ; ತನ್ನ ರಾಜ ಚಿಹ್ನೆಗಳನ್ನು ಇಳಿಸಿಟ್ಟ; ಕೈಮುಗಿದು ನತಮಸ್ತಕನಾಗಿ ಅವರ ಬಳಿಸಾರಿದ. ಮೂರುಬಾರಿ ಪ್ರದಕ್ಷಿಣೆಮಾಡಿ, ಶಿರಬಾಗಿಸಿ, ನಮಸ್ಕರಿಸಿ, ವಿನಯಪೂರ್ವಕ ಉಪಾಸನೆಗೈಯುತ್ತ ಭಗವಾನರ ಪರಮ ಸನ್ನಿಧಿಯಲ್ಲಿ ಕುಳಿತ.

ಕೇವಲ ಜ್ಞಾನಿ ಭಗವಾನ ಮಹಾವೀರರ ಪ್ರಥಮ ಧರ್ಮೋಪದೇಶವು ಪ್ರಾರಂಭವಾಯಿತು. ಅವರ ಉಪದೇಶಾಮೃತ ಸವಿಯುತ್ತ ಸವಿಯುತ್ತ ಮೇಘಕುಮಾರನ ಮನಸ್ಸು ಆನಂದದಿಂದ ಪ್ರಫುಲ್ಲಿತವಾಯಿತು. ಭಗವಾನರಿಗೆ ಮತ್ತೆ ಮತ್ತೆ ವಂದಿಸುತ್ತ ಅವನೆಂದ : "ಭಗವಾನ್! ತಮ್ಮ ಉಪದೇಶದಿಂದ ನಾನು ಪುನೀತನಾದೆ. ನಿರ್ಗ್ರಂಥ ಪ್ರವಚನಕ್ಕೆ ನಾನು ಮಾರುಹೋಗಿದ್ದೇನೆ. ತಾವು ಆಡಿದುದೆಲ್ಲ ಸತ್ಯವಾದುದು, ವಾಸ್ತವಿಕವಾದುದು, ನನಗೆ ಇಷ್ಟವಾದುದು. ಹೇ, ದೇವಾನುಪ್ರಿಯ, ನಾನು ನನ್ನ ತಂದೆ-ತಾಯಿಗಳ ಅನುಮತಿ ಪಡೆದು ತಮ್ಮ ಸನ್ನಿಧಿಯಲ್ಲಿ ಸನ್ಯಾಸದೀಕ್ಷೆ ಸ್ವೀಕರಿಸಬೇಕೆಂದು ಮಾಡಿದ್ದೇನೆ."

ಭಗವಾನ ಮಹಾವೀರರೆಂದರು :

"ಹೇ ದೇವಾನುಪ್ರಿಯ, ನಿನಗೆ ಹೇಗೆ ಸರಿಯನಿಸುತ್ತದೋ ಹಾಗೆಯೇ ಮಾಡು-ಯಾವ ಒತ್ತಾಯವಿಲ್ಲ."

ಮೇಘಕುಮಾರನು ಕೂಡಲೇ ರಥವನ್ನೇರಿ ಅರಮನೆಗೆ ಬಂದನು. ತಂದೆ ತಾಯಿಯರೆದುದು ಕೈಮುಗಿದು ನಿಂತು ಹೇಳಿದ : "ನನ್ನ ತಂದೆ-ತಾಯಿಯರೇ, ನನಗೆ ಶ್ರಮಣ ಭಗವಾನ ಮಹಾವೀರರ ಧರ್ಮ ಬಹಳೇ ಹಿಡಿಸಿದೆ."

ತಂದೆ-ತಾಯಿಗಳೆಂದರು :

"ಮಗು ಭಗವಾನರ ಉಪದೇಶವನ್ನು ಇಷ್ಟೊಂದು ಮೆಚ್ಚಿಕೊಂಡ ನೀನು ಧನ್ಯ. ನೀನು ಭಾಗ್ಯಶಾಲಿ, ನಿನ್ನ ಜನ್ಮ ಸಾರ್ಥಕವಾಯಿತು."

ಮೇಘಕುಮಾರನೆಂದನು : "ನಿಮ್ಮಿಬ್ಬರ ಅನುಮತಿಯಿದ್ದರೆ, ನಾನು ಭಗವಾನರ ಶ್ರಮಣ ಧರ್ಮದ ದೀಕ್ಷೆ ಹೊಂದಬೇಕೆಂದು ಮಾಡಿದ್ದೇನೆ."

ಈ ಮಾತು ಕೇಳುತ್ತಲೇ ರಾಣಿ ಧಾರಿಣಿ ಮೂರ್ಛಿತಳಾಗಿ ಒಮ್ಮೆಲೇ ನೆಲಕ್ಕುರುಳಿದಳು. ಕೂಡಲೇ ಅವಳ ಮುಂದಲೆಗೆ ತಣ್ಣೀರು ಸಿಂಪಡಿಸಿ, ತಣ್ಣನೆಯ ಗಾಳಿ ಹಾಕಿದಾಗ ಮೆಲ್ಲನೇ ಕಣ್ತೆರೆದಳು. ಆದರೆ ಆ ಕಂಗಳ ತುಂಬ ಕಣ್ಣೀರ ಹನಿಗಳು! ವಿಲಾಪಗೈಯುತ್ತಲೇ ರಾಣಿ ಹೇಳಿದಳು : "ಮಗು, ಮೇಘ, ನೀನು ನನ್ನ ಏಕಮೇವ ಕುಮಾರ ನನ್ನ ಬಾಳಿನ ಬೆಳಕು; ಭರವಸೆಯ ಬಿಂದು; ರತ್ನದಂತೆ ಬಹು ಅಮೂಲ್ಯ ಮತ್ತು ಔದುಂಬರ ಪುಷ್ಪದಂತೆ ವಿರಳವಾಗಿ ದೊರೆಯುವ ಜೀವ ನಿನ್ನದು. ಒಂದು ಕ್ಷಣವೂ ನಾನಿನ್ನು ನಿನ್ನನ್ನು ಬಿಟ್ಟಿರುವುದಿಲ್ಲ; ತಿಳಿಯಿತೇ? ನಾವು ಜೀವದಿಂದಿರುವ ವರೆಗೆ, ಮಾನವೀಯ ಭೋಗವಿಲಾಸಗಳನ್ನು ಯಥೇಚ್ಛವಾಗಿಯೇ ಅನುಭೋಗಿಸು. ನಮ್ಮ ಮರಣಾಂತರ, ಪರಿಣಾತ ವಯಸ್ಕನಾಗಿ, ವಂಶವೃಕ್ಷದ ರೆಂಬೆ-ಕೊಂಬೆ ಕೊನರಿಸಿಯಾದ ಬಳಿಕ, ಉದಾಸೀನ ಭಾವ ಬಂದುದಾದರೆ ಗ್ರಹಸ್ಥ ಜೀವನವನ್ನು ತ್ಯಜಿಸಿ ಶ್ರಮಣ ದೀಕ್ಷೆಯನ್ನು ಬೇಕಾದರೆ ಸ್ವೀಕಾರಮಾಡು."

ಮೇಘಕುಮಾರ : "ತಾಯೀ, ನೀನು ಹೇಳಿದ್ದೇನು ಸುಳ್ಳಲ್ಲ. ಆದರೆ ಈ ಮನುಷ್ಯನ ಅಸ್ತಿತ್ವವೇ ಅನಿಶ್ಚಿತವಾದುದು; ಅನಿತ್ಯವಾದುದು. ನೂರಾರು ದುಃಖ-ದುಮ್ಮಾನಗಳಿಂದ ತುಂಬಿಕೊಂಡುದು. ಈ ಜೀವನದ ಕ್ಷಣಭಂಗುರವಾದುದು. ಯಾರಿಗೆ, ಯಾವಾಗ ಕಾಲನ ಕರೆ ಬರುವುದೋ ಹೇಳಲಾಗದು. ಆದ್ದರಿಂದ ನೀವು ಈಗಲೇ ನನಗೆ ಸಮ್ಮತಿ ನೀಡಿದರೆ, ನಾನು ಶ್ರಮಣ ಧರ್ಮ ಸ್ವೀಕಾರಗೈದು ಈ ಮನುಷ್ಯ ಜನ್ಮವನ್ನು ಸಾರ್ಥಕಗೊಳಿಸಬಹುದು ತಾಯೀ!"

ತಾಯಿ : "ಮಗು, ಭಗವಾನ ಮಹಾವೀರರ ಶ್ರಮಣ ಧರ್ಮದ ಪಾಲನೆ ಮಾಡುವುದೆಷ್ಟು ಕಠಿಣವೆಂಬುದು ನಿನಗಿನ್ನೂ ತಿಳಿದಿಲ್ಲ. ಅದಕ್ಕೆ ಬೇಕು ಸರ್ಪದಂಥ ಏಕಾಂತದೃಷ್ಟಿ ಮತ್ತು ಚೂರಿಯಂಥ ಏಕಾಂತಧಾರೆ. ಇದು ಕಬ್ಬಿಣದ ಕಡಲೆ ತಿಂದು ಕರಗಿಸುವಷ್ಟೇ ಕಠಿಣ ಕಾರ್ಯ. ಉಸುಕಿನ ಉಂಡೆಯಲ್ಲಾವರುಚಿ, ಯಾವ ರಸ? ಗಂಗೆಯಂಥ ಮಹಾನದಿಯ ಪ್ರವಾಹದ ವಿರುದ್ಧ ಈಜುವುದು, ಅಥವಾ ಮಹಾಸಾಗರವನ್ನು ಪಾರುಮಾಡುವುದು ಸುಲಭವೇ? ಈ ಧರ್ಮದಾಚರಣೆಯೆಂದರೆ ಅಸಿಧಾರಾವ್ರತವಿದ್ದಂತೆ! ಮಗು, ಶ್ರಮಣ ನಿರ್ಗ್ರಂಥಿಗಳು ಆಹಾರ-ವಿಹಾರಗಳ, ನಿದ್ದೆ-ನೀರಡಿಕೆಗಳ, ಚಳಿ-ಬಿಸಿಲುಗಳ, ರೋಗ-ರುಜಿನಗಳ ಯಾವ ಹಂಗೂ ಇಲ್ಲದ ಬದುಕು ಸಾಗಿಸಬೇಕಾಗುತ್ತದೆ. ಬಂದ ಕಷ್ಟ-ಕಾರ್ಪಣ್ಯಗಳನ್ನೆಲ್ಲ ಸಹಿಸಿಕೊಂಡಿರಬೇಕಾಗುತ್ತದೆ. ನಿನ್ನಂಥ ಸುಕುಮಾರ ಇಂಥ ದಾರುಣ ಕಷ್ಟಗಳನ್ನೆಂತು ತಾಳಿಕೊಂಡು ಬಾಳಿಯಾನು, ಹೇಳು?"

ಮೇಘಕುಮಾರ : "ಓ, ಮಾತೆ! ನೀನಂದದ್ದು ಸುಳ್ಳೇನಲ್ಲ. ಆದರೆ ಇಂಥ ಭಯವೆಲ್ಲ

ಹೇಡಿಗಳಿಗಿರಬೇಕು; ಪೌರುಷಹೀನರಿಗಿರಬೇಕು. ಅವರಿಗೆ ಈ ಬದುಕಿನಲ್ಲಿ ಆಸಕ್ತಿ ಹೆಚ್ಚಿಗಿದ್ದು, ಪರಲೋಕದ ಬಗ್ಗೆ ಅಷ್ಟೇ ಅನಾಸಕ್ತಿ ಇರುತ್ತದೆ. ವೀರರು, ಧೀರರು, ಪರಾಕ್ರಮಿಗಳು ಇಂಥ ಮಾತುಗಳಿಗೆಲ್ಲ ಎಂದೂ ಹೆದರುವುದಿಲ್ಲ. ಆದ್ದರಿಂದ ನಾನು ಭಗವಾನ ಮಹಾವೀರರ ಸನ್ನಿಧಿಯಲ್ಲಿ ಸನ್ಯಾಸ ಸ್ವೀಕರಿಸಲು ನೀವು ಸಮ್ಮತಿ ನೀಡಿ ಆಶೀರ್ವದಿಸಬೇಕು."

ಹೀಗೆ ಹಲವೊಂದು ಊಹಾಪೋಹ ನಡೆದರೂ ಮೇಘಕುಮಾರನು ತನ್ನ ನಿಶ್ಚಲ ನಿಶ್ಚಯವನ್ನು ಸಡಿಲಿಸಲಿಲ್ಲ. ಕೊನೆಗೆ ತಾಯಿಯೇ ಕೇಳಿದಳು : "ಆಗಲಪ್ಪ, ಒಂದು ದಿನವಾದರೂ ನೀನು ರಾಜ್ಯಭಾರ ನಡೆಸುವುದನ್ನು ಕಣ್ಣಾರೆ ಕಾಣಬೇಕೆಂದು ನನ್ನ ಅಭಿಲಾಷೆ. ಅಷ್ಟನ್ನಾದರೂ ಪೂರ್ಣಗೊಳಿಸುವೆಯಾ?"

ಮೇಘಕುಮಾರನು ತಂದೆ-ತಾಯಿಗಳ ಮನೋಭಿಲಾಷೆ ಈಡೇರಿಸಲು ಮೌನಪೂರ್ವಕ ಸಮ್ಮತಿ ನೀಡಿದನು. ಶ್ರೇಣಿಕರಾಜನು ರಾಜ್ಯಾಭಿಷೇಕದ ಸಕಲ ಸಿದ್ಧತೆಗಳನ್ನು ಮಾಡುವಂತೆ ಸಕಲರಿಗೂ ಆದೇಶವಿತ್ತನು.

ಬೆಳ್ಳಿ-ಬಂಗಾರದ ಕಲಶಗಳಿಂದ ರಾಜಕುಮಾರನ ಸ್ನಾನ ನಡೆಯಿತು. ಎಲ್ಲೆಲ್ಲೂ ಪುಷ್ಪ ಮತ್ತು ಪುಷ್ಪಮಾಲೆಗಳ ಅಲಂಕಾರ. ವಾದ್ಯಮೇಳಗಳ ಸಡಗರ. ಜಯಘೋಷಗಳಂತೂ ಮುಗಿಲು ಮುಟ್ಟಿದ್ದವು. ಈ ಆಹ್ಲಾದಮಯ ವಾತಾವರಣದಲ್ಲಿ ಶ್ರೇಣಿಕದೊರೆ ನುಡಿದನು : "ರಾಜಕುಮಾರ, ನೀನು ಜಯಶೀಲನಾಗು! ಶತ್ರುಗಳನ್ನು ಗೆದ್ದು ಮಿತ್ರರಿಗೆ ಸಂರಕ್ಷಣೆ ನೀಡು. ಮಗಧದ ಅಧಿಪತ್ಯವನ್ನು ಕಾಪಾಡಿಕೊಂಡಿರು. ಭರತನಂತೆ ನೀನು ಸಂಸಾರದಲ್ಲಿದ್ದು ಈ ರಾಜ್ಯವೈಭವದ ಉಪಭೋಗ ಮಾಡು!"

ಮೇಘಕುಮಾರನು ಅರಸನಾಗಿ ಪಟ್ಟವೇರಿದೊಡನೆ ಮೊಟ್ಟಮೊದಲು ಮಾಡಿದ ಆದೇಶವೆಂದರೆ- 'ಸಾಧುಗಳಿಗೆ ಯೋಗ್ಯವೆನಿಸುವ ರಜೋಹರಣ-ಪಾತ್ರೆಗಳನ್ನು ತನ್ನಿ. ಕೂದಲು ಕತ್ತರಿಸಲು ಹಡಪಿಗನಿಗೆ ಬರಹೇಳಿ!' ಹಡಪಿಗ ಧಾವಿಸಿಬಂದ, ಸುರಭಿ-ಗಂಗೋದಕಗಳಿಂದ ಕೈಕಾಲು ತೊಳೆದು, ನಾಲ್ಕು ಮಡಿಕೆಯ ಸ್ವಚ್ಛವಾದ ವಸ್ತ್ರದಿಂದ ತನ್ನ ಬಾಯಿ ಮುಚ್ಚಿಕೊಂಡು, ನಾಲ್ಕಂಗುಲ ಹೊರತುಪಡಿಸಿ ರಾಜಕುಮಾರನ ಕೂದಲುಗಳನ್ನೆಲ್ಲ ಕತ್ತರಿಸಿದನು. ಧಾರಿಣಿಮಾತೆ ಈ ಕೂದಲುಗಳನ್ನು ಶುದ್ಧ ವಸ್ತ್ರದಲ್ಲಿ ಕಟ್ಟಿ, ರತ್ನ ಖಚಿತ ಪುಟ್ಟಿಯಲ್ಲಿ ಹಾಕಿ ಮಗನ ನೆನಪಿಗಾಗಿ ತನ್ನ ತಲೆದಿಂಬಿನ ಅಡಿಯಲ್ಲಿಟ್ಟುಕೊಂಡಳು.

ಮೇಘಕುಮಾರನಿಗೆ ಸ್ನಾನ ಮಾಡಿಸಲಾಯಿತು; ಗೋಶಿರ್ಷ ಚಂದನದ ಲೇಪನ ಮಾಡಲಾಯಿತು; ವಸ್ತ್ರಾಭರಣಗಳಿಂದ ಅಲಂಕರಿಸಲಾಯಿತು. ಅದಾದಬಳಿಕ ಆತ ಪಲ್ಲಕ್ಕಿಯಲ್ಲಿ ಕುಳಿತುಕೊಂಡ. ಧಾರಿಣಿಮಾತೆ ಬಲಗಡೆಗಿದ್ದ ಭದ್ರಾಸನದ ಮೇಲೆ ಕುಳಿತಳು. ಎಡಗಡೆಗೆ ರಜೋಹರಣ ಪಾತ್ರೆಗಳನ್ನು ಹಿಡಿದುಕೊಂಡು ತಂದೆ ಕುಳಿತನು. ಎರಡೂ ಬದಿಗಳಲ್ಲಿ ನಿಂತ ಸುಂದರ ತರುಣಿಯರು ಚವರಿ ಬೀಸಿದರು. ಜಯ-ಜಯಕಾರಗಳು ಗಗನ ಭೇದಿಸಿದವು.

ಪಲ್ಲಕ್ಕಿ ಗುಣಶೀಲ ವಿಹಾರ (ಚೈತ್ಯ)ಕ್ಕೆ ಬಂದು ತಲುಪಿತು. ಶ್ರೇಣಿಕರಾಜ ಮತ್ತು ರಾಣೀಧಾರಿಣಿಯರು ತಮ್ಮ ಮಗನನ್ನು ಶಿಷ್ಯ-ಭಿಕ್ಷೆಯ ರೂಪದಲ್ಲಿ ಸಾದರಪಡಿಸಿದರು.

---

1. ಜ್ಞಾತಧರ್ಮಕಥಾ

ಧಾರಿಣಿಮಾತೆಯ ತುಂಬಿದ ಕಂಠ ಕೇಳಿಸಿತು : "ಮಗು, ಬಲು ಎಚ್ಚರಿಕೆಯಿಂದ ಸಂಯಮಪಾಲನೆ ಮಾಡು. ಯಾವುದಕ್ಕೂ ಅಳುಕದಿರು. ಪ್ರಮಾದವೆಸಗದಿರು. ನಾವೂ ಒಂದು ದಿನ ಈ ಮಾರ್ಗಕ್ಕೆ ಬರತಕ್ಕವರೇ."[1] ಭಗವಾನಮಹಾವೀರರು ರಾಜಗೃಹದಲ್ಲಿ ತಮ್ಮ ತಾಪಸೀ ಜೀವನದ 13ನೆಯ ವರ್ಷ ಪೂರ್ತಿಗೊಳಿಸಿದರು. ಕೇವಲಾವಸ್ಥೆ ತಲುಪಿದ ತರುವಾಯ ಇದು ಅವರ ಪ್ರಥಮ ಚಾತುರ್ಮಾಸವಾಗಿತ್ತು.

## ಹದಿನಾಲ್ಕನೆಯ ಚಾತುರ್ಮಾಸ
## ಬ್ರಾಹ್ಮಣ ಕುಂಡಗ್ರಾಮದಲ್ಲಿ ದೇವಾನಂದಾ ಮತ್ತು ಋಷಭದತ್ತರಿಗೆ ದೀಕ್ಷೆ

ಭಗವಾನ ಮಹಾವೀರರು ರಾಜಗೃಹದಲ್ಲಿದ್ದ ಸಂಗತಿ ತಿಳಿದೊಡನೆ ಅವರಿಗೆ ಜನ್ಮಪಿತ್ರ ತಂದೆ-ತಾಯಿ-ಋಷಭದತ್ತ ಬ್ರಾಹ್ಮಣ ಮತ್ತು ದೇವನಂದಾ ಬ್ರಾಹ್ಮಣ ಮತ್ತಿತರ ಪರಿವಾರದವರು ಮಗಾವೀರರ ದರ್ಶನ ಪಡೆಯಲು ಧಾವಿಸಿಬಂದರು. ಆ ಸಂದರ್ಭದಲ್ಲಿ ಮಾತೆ ದೇವಾನಂದಾಳ ಹೃದಯದಲ್ಲಿ ಉದ್ಭವಿಸಿರಬಹುದಾದ ಭಾವನೆಗಳನ್ನು ಯಥಾವತ್ತಾಗಿ ಚಿತ್ರಿಸುವುದು ಎಂಥ ಸಹೃದಯ ಕವಿಗೂ ಕಠಿಣವೆನಿಸೀತು. ತನ್ನ ಮಗನ ಮುಖ ನೋಡುತ್ತಲೇ ತಾಯಿಯ ಕಣ್ಣುಗಳಲ್ಲಿ ಅಶ್ರುಧಾರೆ ಹರಿಯಿತು. ಎಡೆಯಲ್ಲಿ ಅಕ್ಕರತೆಯ ಒರತೆ ಚಿಮ್ಮಿತು. ಗೌತಮ ಗಣಧರನು ಪ್ರಶ್ನಿಸಿದ; "ಭಗವಾನ್! ತಾವು ಕ್ಷತ್ರಿಯಕುಲದ ತ್ರಿಶಲಾದೇವಿಯ ಪುತ್ರರಾದರೂ, ತಮ್ಮನ್ನು ಕಂಡಕೂಡಲೇ ದೇವಾನಂದಾ ದೇವಿಯ ಸ್ತನಗಳಲ್ಲಿ ಹಾಲಿನ ಸೆಲೆಯೊಡೆದದ್ದೆಂತು?" ಭಗವಾನ ಉತ್ತರಿಸಿದರು : "ಗೌತಮ, ದೇವಾನಂದಾಳೇ ನನಗೆ ನಿಜವಾದ ಜನ್ಮಪಿತ್ರ ತಾಯಿ, ನಾನು ಅವಳ ಮಗನೆ. ಬಹುಕಾಲದ ನಂತರ ತನ್ನ ಮಗನನ್ನು ಕಂಡಾಕ್ಷಣ ತಾಯಿಯ ಸ್ತನಗಳಲ್ಲಿ ಹಾಲಿನ ಸೆಲೆಯೊಡೆಯುವುದು ಅಸ್ವಾಭಾವಿಕವೇನಲ್ಲ!"[1]

ಮಹಾವೀರರು ತಮ್ಮ ತಂದೆ-ತಾಯಿಗಳಿಗೆ ಶ್ರಮಣ ಧರ್ಮದ ದೀಕ್ಷೆ ನೀಡಿದರು.

ಮಹಾವೀರರು ಜನ್ಮತಾಳಿದ್ದು ಬ್ರಾಹ್ಮಣಕುಂಡದ ಬಳಿಗಿದ್ದ ಕ್ಷತ್ರಿಯ ಕುಂಡ ಗ್ರಾಮದಲ್ಲಿ ಮಹಾವೀರರು ದೀಕ್ಷಾ ಗ್ರಹಣ ಮಾಡುವ ಮುನ್ನವೇ ಅವರ ತಂದೆ-ತಾಯಿಗಳು ಇಹಲೋಕ ತ್ಯಜಿಸಿದ್ದರೆಂದೂ, ಅವರ ಮಗಳು ಪ್ರಿಯದರ್ಶನಾ[2] ಮತ್ತು ಅಳಿಯ ಜಾಮಾಲಿ ಮಾತ್ರ ಅಲ್ಲಿರುತ್ತಿದ್ದರೆಂದೂ, ಅವರ ಅಣ್ಣಂದಿರಾದ ನಂದಿವರ್ಧನರೂ ಅಲ್ಲಿ ಇರುತ್ತಿದ್ದರೆಂದೂ ಒಂದು ಪ್ರತೀತಿಯಿದೆ.

ಭಗವಾನರು ಕ್ಷತ್ರಿಯಕುಂಡ ಗ್ರಾಮಕ್ಕೆ ಆಗಮಿಸುತ್ತಲೇ ಅವರ ಆಪ್ತ-ಮಿತ್ರರು, ಬಂಧು-

---

1. ಶ್ವೇತಾಂಬರ ಪರಂಪರೆಯ ಪ್ರಕಾರ ಮಹಾವೀರರು ಮೊದಲು ದೇವಾನಂದಾ ಬ್ರಾಹ್ಮಣೀಯ ಗರ್ಭದಲ್ಲಿ ಅವತರಿಸಿದರು. ನಂತರ ಗರ್ಭಹರಣದ ಮೂಲಕ ತ್ರಿಶಾಲಾದೇವಿಯ ಗರ್ಭಕ್ಕೆ ಸಾಗಿಸಲ್ಪಟ್ಟರು. ದಿಗಂಬರ ಪರಂಪರೆಯಲ್ಲಿ ಈ ಗರ್ಭಹರಣದ ಘಟನೆಗೆ ಮಾನ್ಯತೆಯಿಲ್ಲ.
2. ಪ್ರಿಯದರ್ಶನಾ ಜಾಮಾಲಿಯ ಪತ್ನಿಯೆಂಬ ಸಂಗತಿಯ ಉಲ್ಲೇಖ ಭಗವತೀ ಸೂತ್ರದಲ್ಲಿ ಬರುವುದಿಲ್ಲ.

ಬಳಗದವರು ಉತ್ಸುಕರಾಗಿ ಅವರ ದರ್ಶನಕ್ಕಾಗಿ ಧಾವಿಸಿರಬೇಕು- ಆದರೆ ಈ ಸಂದರ್ಭದಲ್ಲಿ ಅವರ ಪತ್ನಿ ಯಶೋದೆಯ ಉಲ್ಲೇಖವಿಲ್ಲ. ಭಗವಾನರ ಧರ್ಮೋಪದೇಶ ಕೇಳಿ ಜಾಮಾಲಿಯು ಶ್ರಮಣದೀಕ್ಷೆ ಸ್ವೀಕರಿಸಿದನು.[1] ಪ್ರಿಯದರ್ಶನಾ ಕೂಡ ತನ್ನ ಪತಿಯನ್ನನು ಸರಿಸಿದಳು. ಮಹಾವೀರರು ವೈಶಾಲಿಯಲ್ಲಿ ತಮ್ಮ 14ನೆಯ ಚಾತುರ್ಮಾಸ ಕಳೆದರು. ಕೇವಲಾವಸ್ಥೆಯ ನಂತರ ಇದು ಅವರ ಎರಡನೆಯ ಚಾತುರ್ಮಾಸ.

## ಹದಿನೈದನೆಯ ಚಾತುರ್ಮಾಸ
## ಕೌಶಾಂಬಿಯಲ್ಲಿ ಜಯಂತಿಯ ದೀಕ್ಷೆ

ವೈಶಾಲಿಯಿಂದ ಹೊರಟು ಮಹಾವೀರರು ವತ್ಸ ಪರಿಸರಕ್ಕೆ ನಡೆದರು. ಆ ಕಾಲದಲ್ಲಿ ಕೌಶಾಂಬಿಯಲ್ಲಿ ಶತಾನೀಕ ದೊರೆಯು ರಾಜ್ಯವಾಳುತ್ತಿದ್ದನು. ಅವನ ರಾಣಿಯ ಹೆಸರು ಮೃಗಾವತಿ. ಅವರ ಮಗನ ಹೆಸರು ಉದಯನ.

ಮಹಾವೀರರು ಕೌಶಾಂಬಿಯಲ್ಲಿ ಪದಾರ್ಪಣ ಮಾಡಿದ ವಾರ್ತೆ ತಲುಪುತ್ತಲೇ ರಾಜಕುಮಾರ ಉದಯನನು ತನ್ನ ಅಕ್ಕ ಜಯಂತಿಯೊಡನೆ ಅವರ ದರ್ಶನಕ್ಕಾಗಿ ಧಾವಿಸಿದನು. ಧರ್ಮೋಪದೇಶ ಕೇಳಿಯಾದ ಬಳಿಕ ಉದಯನನು ತನ್ನ ತಾಯಿಯೊಡನೆ ಅರಮನೆಗೆ ಮರಳಿ ಹೋದರೂ ಜಯಂತಿಯು ಮಾತ್ರ ಅಲ್ಲಿಯೇ ಉಳಿದಳು. ಭಗವಾನ ಮಹಾವೀರರು ಅವಳ ಶಂಕಾ-ಸಮಾಧಾನ ಮಾಡಿದರು- ಆಕೆ ಕೇಳಿದಳು :

"ಭಗವಾನ್, ಜೀವದಲ್ಲಿ ಜಡತ್ವವೆಲ್ಲಿಂದ ಬಂದಿರುತ್ತದೆ?"

ಮಹಾವೀರರೆಂದರು :

"ಜಯಂತೀ, ಹಿಂಸೆ, ಸುಳ್ಳು, ಕಳವು, ದುರಾಚಾರ, ಪರಿಗ್ರಹ, ಕ್ರೋಧ, ಮಾನ, ಮಾಯೆ, ಲೋಭ ಇತ್ಯಾದಿ ಪಾಪಗುಣಗಳ ಮೂಲಕ ಜೀವದಲ್ಲಿ ಜಡತ್ವ ಬಂದಿರುತ್ತದೆ. ಇದರಿಂದಾಗಿ ಜೀವದ ಸಂಸಾರ-ಪರಿಭ್ರಮಣವು ಹೆಚ್ಚುತ್ತಲೇ ಹೋಗುತ್ತದೆ ಮತ್ತು ಅದು ಅನಂತಕಾಲದ ವರೆಗೂ ಅಲೆಯುತ್ತಲೇ ಇರುತ್ತದೆ. ಈ ಪಾಪಗುಣಗಳ ಭಾರ ಕಡಿಮೆ ಮಾಡುವುದರಿಂದ ಜೀವದ ಜಡತ್ವವೂ ಕಡಮೆಯಾಗುತ್ತದೆ ಮತ್ತು ಅದು ಸಂಸಾರ ಸಾಗರದಿಂದ ಪಾರುಗೊಳ್ಳುತ್ತದೆ."

ಜಯಂತಿ : "ಭಗವಾನ್! ಸುಪ್ತಾವಸ್ಥೆ ಒಳ್ಳೆಯದೋ ಜಾಗೃತಾವಸ್ಥೆ ಒಳ್ಳೆಯದೋ?"

ಮಹಾವೀರ : "ಜಯಂತೀ, ಕೆಲವರ ಮಟ್ಟಿಗೆ ಸುಪ್ತಾವಸ್ಥೆ ಒಳ್ಳೆಯದೆನಿಸಿದರೆ, ಮತ್ತೆ ಕೆಲವರ ಮಟ್ಟಿಗೆ ಜಾಗೃತಾವಸ್ಥೆ ಒಳ್ಳೆಯದೆನಿಸುತ್ತದೆ. ಅಧಾರ್ಮಿಕ ಜನರು ಉಪ್ತಾವಸ್ಥೆಯಲ್ಲಿರುವುದೇ ವಾಸಿ. ಯಾಕೆಂದರೆ ಅದರಿಂದ ಇತರ ಪ್ರಾಣಿಗಳಿಗೆ ತೊಂದರೆಯೂ ಕಡಿಮೆಯಾಗುತ್ತದೆ. ಅಲ್ಲದೆ ಅದರಿಂದ ಅಧಾರ್ಮಿಕ ಪ್ರವೃತ್ತಿಗಳೂ ಕಡಿಮೆ ಆಗುತ್ತದೆ. ಆದರೆ ಧಾರ್ಮಿಕ ಶ್ರದ್ಧೆಯುಳ್ಳಜನ ಜಾಗೃತಾವಸ್ಥೆಯಲ್ಲಿರುವುದಗತ್ಯ. ಅದರಿಂದಾಗಿ ಅವರು ಇತರರನ್ನು ಸುಖಿಯಾಗಿರಿಸುವುದಲ್ಲದೆ, ಪುಣ್ಯ ಕಾರ್ಯದಲ್ಲಿ ಭಾಗಿಗಳಾಗಿರಬಲ್ಲರು."

---

1. ಭಗವತಿ ಸೂತ್ರ (9-6)

ಜಯಂತಿಯು ಭಗವಾನ ಮಹಾವೀರರಿಗೆ ಇನ್ನೆಷ್ಟೋ ಪ್ರಶ್ನೆಗಳನ್ನು ಕೇಳಿ ಅವರಿಂದ ಸಮಾಧಾನಕರ ಉತ್ತರಗಳನ್ನು ಪಡೆದು ಸಂತುಷ್ಟಳಾದಳು. ಕೊನೆಗೆ ಶ್ರಮಣೀ-ದೀಕ್ಷೆ ಪಡೆದು ನಿರ್ವಾಣ ಹೊಂದಿದಳು.[1]

ಕೌಶಾಂಬಿಯಿಂದ ಭಗವಾನ ಮಹಾವೀರರು ಕೋಸಲ ದೇಶದತ್ತ ಪಾದ ಬೆಳೆಸಿದರು. ಶ್ರಾವಸ್ತಿ ತಲುಪಿದ ತರುವಾಯ ಅವರು ಸುಮನೋಭದ್ರ ಮತ್ತು ಸುಪ್ರತಿಷ್ಠ ಎಂಬ ಹೆಸರಿನ ಸದ್ಗೃಹಸ್ಥರಿಗೆ ಶ್ರಮಣ ಧರ್ಮ ದೀಕ್ಷೆಯನ್ನು ದಯಪಾಲಿಸಿದರು.

ಅಲ್ಲಿಂದ ಭಗವಾನ ಮಹಾವೀರರು ತಮ್ಮ ಜನ್ಮ ಭೂಮಿಯಾದ ವಿದೇಹದತ್ತ ನಡೆದರು. ವಾಣಿಜ್ಯ ಗ್ರಾಮ ತಲುಪಿ ಅವರು ದುಯಿಪಲಾಸ ಚೈತ್ಯದಲ್ಲಿ ನಿಂತರು.

ವಾಣಿಜ್ಯ ಗ್ರಾಮದಲ್ಲಿ ಆನಂದನೆಂಬ ಧನಾಢ್ಯ ಗೃಹಸ್ಥನೊಬ್ಬ ವಾಸವಾಗಿದ್ದ ಅವನಲ್ಲಿ ಲೆಕ್ಕವಿಲ್ಲದಷ್ಟು ಬೆಳ್ಳಿ-ಬಂಗಾರ, ದನ-ಕರು, ಹೊಲ-ಗದ್ದೆ ಕುದುರೆ-ಗಾಡಿ, ವಾಹನ-ಸೌಕರ್ಯಗಳಿದ್ದವು. ಭಗವಾನ ಮಹಾವೀರರುಪದೇಶವನ್ನಾಲಿಸುತ್ತಲೇ ಆನಂದನು ಶ್ರಾವಕನ 12 ವ್ರತಗಳನ್ನು ಸ್ವೀಕರಿಸಿದನು. ನಿರ್ದೋಷ ಅನ್ನಪಾನಾದಿಗಳಿಂದ ಶ್ರಮಣನಿರ್ಗ್ರಂಥರ ಸೇವಾ-ಸನ್ಮಾನಗೈದು ಅವರ ಉಪಾಸನೆ ನಡೆಸುವ ನಿಯಮಕ್ಕೂ ಬದ್ಧನಾದನು. ಆನಂದನ ಮಡದಿ ಶಿಯಾನಂದಾ ಕೂಡ ಶ್ರಾವಿಕವ್ರತ ಸ್ವೀಕರಿಸಿದಳು.[2]

ಭಗವಾನರು ವಾಣಿಜ್ಯಗ್ರಾಮದಲ್ಲಿ 15ನೆಯ ಚಾತುರ್ಮಾಸ-ಕೇವಲ ಜ್ಞಾನ ಪ್ರಾಪ್ತವಾದ ನಂತರದ ಮೂರನೆಯದು-ಕಳೆದರು.

## ರಾಜಗೃಹದಲ್ಲಿ ಹದಿನಾರನೆಯ ಚಾತುರ್ಮಾಸ

ವಾಣಿಜ್ಯ ಗ್ರಾಮದಿಂದ ಭಗವಾನ ಮಹಾವೀರರು ಮತ್ತೆ ಮಗಧದತ್ತ ನಡೆದರು; - ರಾಜಗೃಹದಲ್ಲಿ ಧನ್ಯ ಮತ್ತೆ ಶಾಲಿಭದ್ರರಿಗೆ ಶ್ರಮಣಧರ್ಮದ
ದೀಕ್ಷೆ ನೀಡಿದರು. ಭಗವಾನರು ಇಲ್ಲಿ ಹದಿನಾರನೆಯ-ಕೇವಲಾವಸ್ಥೆಯ ನಂತರ ನಾಲ್ಕನೆಯ-ಚಾತುರ್ಮಾಸ ವ್ಯಯಿಸಿದರು.

## ವಾಣಿಜ್ಯ ಗ್ರಾಮದಲ್ಲಿ ಹದಿನೇಳನೆಯ ಚಾತುರ್ಮಾಸ

ರಾಜಗೃಹದಿಂದ ಹೊರಟು ಭಗವಾನ ಮಹಾವೀರರು ಚಂಪಾದ ಕಡೆಗೆ ಸಂಚಾರಗೈದರು. ಚಂಪಾದಲ್ಲಿ ರಾಜಕುಮಾರ ಮಹಚಂದ್ರನಿಗೆ ಶ್ರಮಣ ಧರ್ಮ ದೀಕ್ಷೆ ನೀಡಿದರು. ಕಾಮದೇವನು ಶ್ರಮಣೋಪಾಸಕವ್ರತ ಸ್ವೀಕರಿಸಿದನು. ಭಗವಾನರು ನಿರ್ಗ್ರಂಥ-ನಿರ್ಗ್ರಂಥಿನಿಯರಿಗೆ ಕಾಮ ದೇವನಂತೆ ದೃಢಸಂಯಮಿಗಳಾಗಿರಲು ಉಪದೇಶವಿತ್ತರು.[1]

ಮುಂದೆ ಸಿಂಧು-ಸೌವೀರ ಜನಪದವ ದೊರೆ ಉದಯನನಿಗೆ ಶ್ರಮಣ ಧರ್ಮದ

---

1. ಭಗವತೀ ಸೂತ್ರ (12.2)
2. ಉಪಾಸಕದಶಾ (1)

ದೀಕ್ಷಾದಾನದ್ಗೈಯಲು ಭಗವಾನ ಮಹಾವೀರರು ಚಂಪಾದಿಂದ ವೀತಿಭಯನಗರಕ್ಕೆ ಹೊರಟರೆಂಬ ಉಲ್ಲೇಖವಿದೆ.[2] ಆದರ ನಂತರ ಮತ್ತೆ ಅವರು ವಾಣಿಜ್ಯಗ್ರಾಮದಲ್ಲಿ ತಮ್ಮ ಹದಿನೇಳನೆಯ ಚತುರ್ಮಾಸ ಕಳೆದರು. ಕೇವಲಾವಸ್ಥೆಯ ನಂತರದ ಐದನೆಯ ಚತುರ್ಮಾಸ ಆದಾಗಿತ್ತು.

## ರಾಜಗೃಹದಲ್ಲಿ ಹದಿನೆಂಟನೆಯ ಚಾತುರ್ಮಾಸ

ಭಗವಾನ ಮಹಾವೀರರು ವಾಣಿಜ್ಯ ಗ್ರಾಮದಿಂದ ವಾರಣಾಸಿಗೆ ಆಗಮಿಸಿದರು; ಮತ್ತು ಕೋಷ್ಟಕವಿಹಾರದಲ್ಲಿ ತಂಗಿದರು. ಇಲ್ಲಿ ಅವರು ಚೂಲಣಿಪಿತಾ ಮತ್ತು ಸುರಾದೇವರೆಂಬ ಗೃಹಸ್ಥರಿಗೆ ಶ್ರಾವಕವ್ರತ ಬೋಧಿಸಿದರು.[3]

ವಾರಣಾಸಿಯಿಂದ ಅವರು ಆಲಭಿಯಾಕ್ಕೆ ಬಂದರು. ಇಲ್ಲಿ ಪುದ್ಗಲ ಪರಿವ್ರಾಜಕನು ಶ್ರಮಣದೀಕ್ಷಾಧಾರಣಗೈದನು.[4] ಚುಲ್ಲಶತಕಗೃಹಪತಿಯೂ ಶ್ರಾವಕವ್ರತ ಸ್ವೀಕರಿಸಿದನು.[5] ಅಲ್ಲಿಂದ ಮಹಾವೀರರು ಮಗಧಕ್ಕೆ ಮರಳಿದರು. ರಾಜಗೃಹದಲ್ಲಿ ಮಕಾಯೀ ಮುಂತಾದ ಗೃಹಸ್ಥರಿಗೆ ಶ್ರಮಣ ಧರ್ಮದೀಕ್ಷೆಯಿತ್ತರು. ಭಗವಾನರು ಇಲ್ಲಿ ತಮ್ಮ ಹದಿನೆಂಟನೆಯ ಚಾತುರ್ಮಾಸ- ಅಂದರೆ ಕೇವಲಾವಸ್ಥೆಯ ತರುವಾಯದ ಆರನೆಯ ಚಾತುರ್ಮಾಸ ಕಳೆದರು.

## ಹತ್ತೊಂಬತ್ತನೆಯ ಚಾತುರ್ಮಾಸ

ಕೆಲ ಕಾಲ ಮಗಧ ರಾಜ್ಯದಲ್ಲಿಯೇ ಭಗವಾನರು ಸಂಚರಿಸುತ್ತಿದ್ದರು. ಮಗಧದ ದೊರೆ ಶ್ರೇಣಿಕ ಬಿಂಬಸಾರನು ಭಗವಾನರ ದರ್ಶನ ಪಡೆದನು. ಶ್ರೇಣಿಕರಾಜನು ತನ್ನ ಮರಣಾನಂತರ ನರಕಕ್ಕೆ ಹೋಗುವನೆಂದೂ ಮುಂದೆ ಮಾತ್ರ ತೀರ್ಥಂಕರನಾಗಿ ಬರುವನೆಂದೂ ಭಗವಾನ ಮಹಾವೀರರು ಭವಿಷ್ಯ ನುಡಿದರು.

ರಾಜಗೃಹದಲ್ಲಿ ಭಗವಾನರು ಶ್ರೇಣಿಕನ ರಾಜಕುಮಾರನಾದ ಅಭಯ ಕುಮಾರನಿಗೂ ಇತರ ರಾಜಪುತ್ರರಿಗೂ ಶ್ರಮಣಧರ್ಮದೀಕ್ಷೆಯಿತ್ತರು. ಶ್ರೇಣಿಕದೊರೆಯ ಅನೇಕ ರಾಣಿಯರೂ ಶ್ರಮಣೀ-ದೀಕ್ಷೆ ಸ್ವೀಕರಿಸಿದರು. ಇಲ್ಲಿ ಕಳೆದದ್ದು ಭಗವಾನರ ಹತ್ತೊಂಬತ್ತನೆಯ ಚಾತುರ್ಮಾಸ- ಕೇವಲ ಜ್ಞಾನಪ್ರಾಪ್ತಿಯ ನಂತರ ಏಳನೆಯದು.

## ವೈಶಾಲಿಯಲ್ಲಿ ಇಪ್ಪತ್ತನೆಯ ಚಾತುರ್ಮಾಸ

ಕೇವಲಜ್ಞಾನಿ ಭಗವಾನರು ವತ್ಸ ದೇಶದತ್ತ ಪ್ರಯಾಣ ಬೆಳೆಸಿದರು. ಅವರು ಕೌಶಾಂಬಿ ತಲುಪಿದ ಸಂದರ್ಭದಲ್ಲಿ ಉಜ್ಜಯಿನಿಯ ದೊರೆ ಚಂಡ ಪ್ರದ್ಯೋತನು ಮೃಗಾವತಿ ರಾಣಿಯನ್ನು ವಶಪಡಿಸಕೊಳ್ಳುವ ಉದ್ದೇಶದಿಂದ ಕೌಶಾಂಬಿಯ ಮೇಲೆ ದಾಳಿಗೈಯವ ಆಲೋಚನೆಯಲ್ಲಿದ್ದ ಈ ಯುದ್ಧದ ಅಪಾಯದಿಂದ ಜನಸಮುದಾಯವನ್ನು ಸಂರಕ್ಷಿಸಬೇಕೆಂದು ರಾಣಿ ಮೃಗಾವತಿಯು ಮಹಾವೀರರಲ್ಲಿ ಮೊರೆಯಿಟ್ಟಳು. ಚಂಡಪ್ರದ್ಯೋತ ದೊರೆಯೂ ಅಲ್ಲಿ ಉಪಸ್ಥಿತನಿದ್ದನು. ಪುರುಷರು ಸ್ತ್ರೀಯರ ಮೇಲೆ ನಡೆಸುವ ದೌರ್ಜನ್ಯಗಳ ಕುರಿತು ಭಗವಾನರ ಆಖ್ಯಾನ ನಡೆದಿತ್ತು.

ಆ ಉಪದೇಶ ಕೇಳುತ್ತಲೇ ತಾನು ದೀಕ್ಷಾಗ್ರಹಣ ಮಾಡುವ ಅಭಿಲಾಷೆ ವ್ಯಕ್ತ ಪಡಿಸಿದಳು ಮೃಗಾವತಿ. ಶತಾನೀಕ ದೊರೆಯಂತೂ ಆ ಮೊದಲೇ ಪರಲೋಕವಾಸಿಯಾಗಿದ್ದ ಆದ್ದರಿಂದ ಚಂಡಪ್ರದ್ಯೋತ ದೊರೆಯ ಸಮಾಧಾನಕ್ಕಾಗಿ ಅವನ ಸಮ್ಮತಿ ಕೇಳಿ ಪಡೆದು ಮೃಗಾವತಿರಾಣಿ ದೀಕ್ಷಾಗ್ರಹಣ ಮಾಡಿದಳು. ಅಷ್ಟೇ ಅಲ್ಲ, ಚಂಡಪ್ರದ್ಯೋತ ದೊರೆಯ ಎಂಟು ರಾಣಿಯರೂ ದೀಕ್ಷೆ ಸ್ವೀಕರಿಸಿದರು.

ಮಹಾವೀರರು ವಿದೇಹದತ್ತ ಪ್ರಯಾಣ ಬೆಳೆಸಿದರು. ವೈಶಾಲಿಗೆ ಹೋಗಿ ತಮ್ಮ ಇಪ್ಪತ್ತನೆಯ ಚಾತುರ್ಮಾಸ ಆಚರಿಸಿದರು-ಕೈವಲ್ಯಾವಸ್ಥೆಯ ನಂತರದ ಎಂಟನೆಯ ಚಾತುರ್ಮಾಸ ಅದಾಗಿತ್ತು.

## ವಾಣಿಜ್ಯ ಗ್ರಾಮದಲ್ಲಿ ಇಪ್ಪತ್ತೊಂದನೆಯ ಚಾತುರ್ಮಾಸ

ಮಹಾವೀರರು ಮಿಥಿಲೆಯ ದಾರಿ ಹಿಡಿದರು. ಅಲ್ಲಿಂದ ಕಾಕಂದಿ ಮತ್ತು ಶ್ರಾವಸ್ತಿಗಳ ಮೇಲೆ ಹಾಯ್ದು ಪಾಂಚಾಲ, ಶೂರಸೇನ, ಕುರು-ಮುಂತಾದ ಕ್ಷೇತ್ರಗಳಲ್ಲಿ ಸಂಚರಿಸಿದರು.

ಕಾಕಂದಿಯಲ್ಲಿ ಇವರ ಉಪದೇಶ ಕೇಳಿ ಶ್ರೀಮಂತ ಮಹಿಳೆ ಭದ್ರಾವತಿಯ ಮಗ ಧನ್ಯನು ವೈರಾಗ್ಯ ಸ್ವೀಕಾರ ಮಾಡಿದನು. ಬಲು ಸಂಭ್ರಮದಿಂದ ಅವನ ವೈರಾಗ್ಯ ಸ್ವೀಕಾರ ಸಮಾರಂಭ ನಡೆಯಿತು. ಆಗ ದೊರೆಯೂ ಅಲ್ಲಿ ಉಪಸ್ಥಿತನಿದ್ದ. ಧನ್ಯನ ತಪಸ್ಸೆಂದರೆ ಮಹಾದುಷ್ಕರವಾದ ತಪಸ್ಸೆಂದು ಭಗವಾನ ಮಹಾವೀರರು ಘೋಷಿಸಿದರು. ಕಾಂಪಿಲ್ಯದಲ್ಲಿ ಭಗವಾನರು ಕುಂಡಕೋಲಿಕ ಎಂಬ ಗೃಹಸ್ಥರಿಗೆ ಶ್ರಾವಕವ್ರತ ಬೋಧಿಸಿದರು.

ಪೊಲಾಸಪುರದಲ್ಲಿ ಭಗವಾನ ಮಹಾವೀರರು ಸದ್ದಾಲಪುತ್ರ ಎಂಬ ಕುಂಬಾರನಿಗೂ ಅವನ ಮಡದಿಯಾದ ಅಗ್ನಿಮಿತ್ರಾಳಿಗೂ ಶ್ರಾವಕಧರ್ಮದ ಹನ್ನೆರಡು ವ್ರತಗಳ ಉಪದೇಶ ನೀಡಿದರು - ಈ ಸದ್ದಾಲಪುತ್ರನು ಮಂಖಲಿಪುತ್ರ ಗೋಶಾಲರಿಂದ ಪ್ರತಿಪಾದಿತವಾದ ಆಜೀವಿಕ ಮತದ ಸಿದ್ಧಾಂತಗಳಲ್ಲಿ ಬಲ್ಲಿದನಾಗಿದ್ದನು.[1] ವಾಣಿಜ್ಯ ಗ್ರಾಮದಲ್ಲಿ ಭಗವಾನರು ತಮ್ಮ ಇಪ್ಪತ್ತೊಂದನೆಯ ಚಾತುರ್ಮಾಸ-ಕೈವಲ್ಯಾವಸ್ಥೆಯ ನಂತರದ ಒಂಬತ್ತನೆಯ ಚಾತುರ್ಮಾಸ-ಆಚರಿಸಿದರು.

## ರಾಜಗೃಹದಲ್ಲಿ ಇಪ್ಪತ್ತೆರಡನೆಯ ಚಾತುರ್ಮಾಸ

ಮಳೆಗಾಲದ ನಂತರ ಮಹಾವೀರರು ಮತ್ತೆ ಮಗಧದ ಕಡೆಗೆ ಪ್ರಯಾಣ ಬೆಳೆಸಿದರು. ರಾಜಗೃಹದಲ್ಲಿ ಮಹಾಶತಕನೆಂಬ ಗೃಹಸ್ಥನಿಗೆ ಶ್ರಾವಕ ಧರ್ಮವನ್ನು ಬೋಧಿಸಿ ದೀಕ್ಷೆಯಿತ್ತರು. ತನ್ನ ಮಡದಿಯಿಂದ ಅನೇಕ ಅಡ್ಡಿ-ಆತಂಕಗಳುಂಟಾದರೂ ಮಹಾಶತಕನು ತನ್ನ ವ್ರತ-ನಿಯಮಗಳನ್ನು ಅತ್ಯಂತ ನಿಷ್ಠೆಯಿಂದ ಪಾಲಿಸುತ್ತಿದ್ದನು.[1] ಇಲ್ಲಿ ಮಹಾವೀರ ಮತ್ತು ಪಾರ್ಶ್ವಾಪತ್ಯ

---

1. ಉಪಾಸಕದಶಾ (7)
2. ಉಪಾಸಕದಶಾ (8)

ಸಾಧುಗಳ ನಡುವೆ 'ಕಾಲ'ಕ್ಕೆ ಸಂಬಂಧಿಸಿದ ಗಂಭೀರ ಚರ್ಚೆ ನಡೆಯಿತು. ಪಾರ್ಶ್ವಪತ್ಯ ಸಾಧುಗಳು ಮಹಾವೀರರು ಸರ್ವಜ್ಞರೆಂದೂ ಸರ್ವದರ್ಶಿಗಳೆಂದೂ ಘೋಷಿಸಿ ಅವರ ಪಂಚ ಮಹಾವ್ರತಗಳನ್ನು ಅಂಗೀಕರಿಸಿದರು.[2] ರಾಜಗೃಹದಲ್ಲಿ ಭಗವಾನರು ಇಪ್ಪತ್ತೆರಡನೆಯ ಚಾತುರ್ಮಾಸಕಳೆದರು. ಇದು ಅವರ ಕೈವಲ್ಯಾವಸ್ಥೆಯ ನಂತರ ಹತ್ತನೆಯ ಚಾತುರ್ಮಾಸ.

## ವಾಣಿಜ್ಯ ಗ್ರಾಮದಲ್ಲಿ ಇಪ್ಪತ್ಮೂರನೆಯ ಚಾತುರ್ಮಾಸ

ಭಗವಾನ ಮಹಾವೀರರು ರಾಜಗೃಹದಿಂದ ಪಡುವಣದ ದಾರಿ ಹಿಡಿದರು. ಕೃತಾಂಗಲಾನಗರ ತಲುಪಿ ಛತ್ರಪಲಾಶ-ಚೈತ್ಯದಲ್ಲಿ ನಿಂತರು. ಆಗ ಶ್ರಾವಸ್ತಿಯೊಳಗೆ ಸ್ಕಂದಕನೆಂಬ ಹೆಸರಿನ ಪರಿವ್ರಾಜಕನಿರುತ್ತಿದ್ದನು ಅವನು ನಾಲ್ಕು ವೇದಗಳಲ್ಲಿ, ಇತಿಹಾಸ-ಪುರಾಣಗಳಲ್ಲಿ, ತಜ್ಞನೂ, ನಿಘಂಟು ರಚನಾ ಕುಶಲನೂ, ನೀತಿ ಮತ್ತು ದರ್ಶನಶಾಸ್ತ್ರ ಪಂಡಿತನೂ ಎಂದು ಹೆಸರಾದವನು. ಭಗವಾನರು ಕೃತಾಂಗಲಾಕ್ಕೆ ಆಗಮಿಸಿದ ಸಮಾಚಾರ ತಿಳಿಯುತ್ತಲೇ ಸ್ಕಂದಕನು ತನ್ನ ಸಂಕೇತ, ಪಾತ್ರೆ ಮುಂತಾದವುಗಳನ್ನು ತೆಗೆದುಕೊಂಡು ಭಗವಾನರ ದರ್ಶನಕ್ಕೆ ಬಂದನು; ಅವರ ಉಪದೇಶ ಕೇಳಿ ಶ್ರಮಣ ದೀಕ್ಷೆ ಸ್ವೀಕರಿಸಿದನು.[3]

ಕೃತಾಂಗಲಾದಿಂದ ಮಹಾವೀರರು ಶ್ರಾವಸ್ತಿಗೆ ನಡೆದರು. ಇಲ್ಲಿ ನಂದಿನಿ ಮತ್ತು ಸಾಲಿಹಿಯರ ತಂದೆಗಳಿಗೆ ಶ್ರಾವಕವ್ರತ ಬೋಧಿಸಿದರು.[4] ಭಗವಾನರು ವಾಣಿಜ್ಯ ಗ್ರಾಮದಲ್ಲಿ ತಮ್ಮ ಇಪ್ಪತ್ಮೂರನೆಯ, ಅಂದರೆ ಕೈವಲ್ಯಾವಸ್ಥೆಯ ನಂತರದ ಹನ್ನೊಂದನೆಯ ಚಾತುರ್ಮಾಸ ಆಚರಿಸಿದರು.

## ರಾಜಗೃಹದಲ್ಲಿ ಇಪ್ಪತ್ನಾಲ್ಕನೆಯ ಚಾತುರ್ಮಾಸ

ಮಹಾವೀರರು ಬ್ರಾಹ್ಮಣಕುಂಡ ಗ್ರಾಮಕ್ಕೆ ಬಂದು ದುತಪಲಾಶವನ ವಿಹಾರದಲ್ಲಿ ನಿಂತರು. ಅಲ್ಲಿಂದ ವತ್ಸ ಪರಿಸರದ ಮೇಲಿಂದ ಕೌಶಾಂಬಿಗೆ ತಲುಪಿದರು. ಮಗಧದ ಕಡೆಗೆ ಹೊರಟು ರಾಜಗೃಹಕ್ಕೆ ಆಗಮಿಸಿದರು; ಅಲ್ಲಿಯ ಗುಣಶೀಲ ಚೈತ್ಯದಲ್ಲಿ ತಂಗಿದರು. ರಾಜಗೃಹದಲ್ಲಿ ಮಹಾವೀರ ಮತ್ತು ಗೌತಮ ಗಣಧರರ ಮಧ್ಯೆ ಪರ್ಯುಪಾಸನೆಯ ಬಗ್ಗೆ ಚರ್ಚೆ ನಡೆಯಿತು :

**ಗೌತಮ :** ಹೇ ಭಗವಾನ್! ಶ್ರಮಣ ಅಥವಾ ಬ್ರಾಹ್ಮಣರ ಪರ್ಯುಪಾಸನೆ ಗೈಯುವುದರಿಂದ ಏನು ಫಲ ಪ್ರಾಪ್ತಿಯಾಗುತ್ತದೆ?

**ಮಹಾವೀರ :** (ಸತ್‌ಶಾಸ್ತ್ರಗಳ) ಶ್ರವಣ.

---

1. ಭಗವತೀಸೂತ್ರ (5.9)
2. ಭಗವತೀಸೂತ್ರ (2.1)
3. ಉಪಾಸಕದಶಾ (9 ಮತ್ತು 10)

**ಗೌತಮ** : ಶ್ರವಣದಿಂದ ಯಾವ ಫಲ ದೊರೆಯುತ್ತದೆ?

**ಮಹಾವೀರ** : ಜ್ಞಾನ.

**ಗೌತಮ** : ಜ್ಞಾನದಿಂದ ಯಾವ ಫಲ ಪ್ರಾಪ್ತಿಯಾಗುತ್ತದೆ?

**ಮಹಾವೀರ** : ವಿಜ್ಞಾನ (ವಿವೇಕ-ಜ್ಞಾನ).

**ಗೌತಮ** : ವಿಜ್ಞಾನದಿಂದಾದ ಫಲ ದೊರೆಯುತ್ತದೆ?

**ಮಹಾವೀರ** : ಪ್ರತ್ಯಾಖ್ಯಾನ (ಪಾಪದ ತ್ಯಾಗ).

**ಗೌತಮ** : ಪ್ರತ್ಯಾಖ್ಯಾನದಿಂದೇನು ಫಲ?

**ಮಹಾವೀರ** : ಸಂಯಮ.

**ಗೌತಮ** : ಸಂಯಮದಿಂದಾದ ಫಲ ದೊರೆಯುತ್ತದೆ?

**ಮಹಾವೀರ** : ನಿರಾಸ್ರವವಾಗುವುದು (ಪಾಪಕರ್ಮ ವಿಮೋಚನೆ).

**ಗೌತಮ** : ನಿರಾಸ್ರವವಾಗುವುದರಿಂದೇನು ಫಲ?

**ಮಹಾವೀರ** : ತಪಸ್ಸಿನ ಆಚರಣೆ.

**ಗೌತಮ** : ತಪಸ್ಸು ಆಚರಿಸುವುದರಿಂದಾವ ಲಾಭ?

**ಮಹಾವೀರ** : ಕರ್ಮರೂಪ ಮಲ ಸ್ವಚ್ಛವಾಗುವುದು.

**ಗೌತಮ** : ಕರ್ಮರೂಪ ಮಲ ಸ್ವಚ್ಛವಾಗುವುದರಿಂದಾವ ಫಲ?

**ಮಹಾವೀರ** : ನಿಷ್ಕ್ರಿಯತ್ವ (ತನು-ಮನ-ವಾಕ್ ವ್ಯವಹಾರಗಳ ನಿರೋಧ).

**ಗೌತಮ** : ನಿಷ್ಕ್ರಿಯತ್ವದ ಫಲವೇನು?

**ಮಹಾವೀರ** : ಸಿದ್ಧಿ.[1]

ಮಹಾವೀರರ ಇಪ್ಪತ್ನಾಲ್ಕನೆಯ-ಕೈವಲ್ಯಾವಸ್ಥೆಯ ನಂತರದ ಹನ್ನೆರಡನೆಯ-ಚಾತುರ್ಮಾಸವು ರಾಜಗೃಹದಲ್ಲಿ ಕಳೆಯಿತು..

## ಮಿಥಿಲೆಯಲ್ಲಿ ಇಪ್ಪತ್ತೈದನೆಯ ಚಾತುರ್ಮಾಸ

ಭಗವಾನರು ಚಂಪಾದ ಕಡೆಗೆ ಹೊರಟರು. ಅಲ್ಲಿ ಶ್ರೇಣಿಕ ದೊರೆಯ ಹತ್ತು ಮೊಮ್ಮಕ್ಕಳು ದೀಕ್ಷಾಗ್ರಹಣ ಮಾಡಿದರು. ಹಾಗೆಯೇ ಮಾಕಂದೀಪುತ್ರ ಜಿನಪಾಲಿತರೂ ಶ್ರಮಣ ಧರ್ಮದ ದೀಕ್ಷೆಯನ್ನು ಪಡೆದರು. ಅಲ್ಲಿಯ ಶ್ರಮಣ-ಶ್ರಮಣಿಯರೆಲ್ಲ ಜಿನಪಾಲಿತರಂತೆ ವ್ರತನಿಯಮ-ಪಾಲನೆಯಲ್ಲಿ ಸದೃಢಚಿತ್ತದವರಾಗಿರಬೇಕೆಂದು ಭಗವಾನರು ಬೋಧಿಸಿದರು.[2] ವಿದೇಹ ತಲುಪಿದ ತರುವಾಯ ಕಾಕಂದೀನಗರದ ಕ್ಷೇ ಕ, ಧೃತಿಧರ ಇತ್ಯಾದಿ ಗೃಹಸ್ಥರಿಗೆ ಶ್ರಮಣ ದೀಕ್ಷೆಯಿತ್ತರು. ಮಹಾವೀರರು ಇಪ್ಪತ್ತೈದನೆಯ- ಅ ನರೆ ಕೈವಲ್ಯಾವಸ್ಥೆಯ ನಂತರ ಹದಿಮೂರನೆಯ ಚಾತುರ್ಮಾಸವನ್ನು ಮಿಥಿಲೆಯಲ್ಲಿ ಆಚರಿಸಿದರು.

---

1. ಭಗವತೀಸೂತ್ರ (2.5)
2. ಣೀತಾಧರ್ಮ ಕಥಾ (9)

### ಇಪ್ಪತ್ತಾರನೆಯ ಚಾತುರ್ಮಾಸ

ಮುಂದೆ ಮಹಾವೀರರು ಅಂಗ ಜನಪದದಲ್ಲಿ ಸಂಚರಿಸಿದರು. ರಾಜಾ ಶ್ರೇಣಿಕನ ಹತ್ತು ವಿಧವಾ ರಾಣಿಯರು ಶ್ರಮಣಿಯರ ದೀಕ್ಷಾ ಗ್ರಹಣ ಗೈದರು. ಮಹಾವೀರರು ತಮ್ಮ ಇಪ್ಪತ್ತಾರನೆಯ ಚಾತುರ್ಮಾಸವನ್ನೂ ಮಿಥಿಲಾನಗರಿಯಲ್ಲಿಯೇ ಕಳೆದರು. ಅದು ಕೇವಲ ಜ್ಞಾನಪ್ರಾಪ್ತಿಯ ನಂತರದ ಹದಿನಾಲ್ಕನೆಯ ಚಾತುರ್ಮಾಸ.

### ಇಪ್ಪತ್ತೇಳನೆಯ ಚಾತುರ್ಮಾಸ

ಮಳೆಗಾಲ ಮುಗಿದ ನಂತರ ಮಹಾವೀರರು ವೈಶಾಲಿಯ ಮಾರ್ಗವಾಗಿ ಶ್ರಾವಸ್ತಿಗೆ ಪ್ರಯಾಣ ಬೆಳೆಸಿದರು. ವೈಶಾಲಿಯಲ್ಲಿ ಕೂಣಿಕ ಅಜಾತ ಶತ್ರುವಿನ ತಮ್ಮಂದಿರಾದ ಹಲ್ಲ ಮತ್ತು ವಿಹಲ್ಲರಿಗೆ ದೀಕ್ಷೆ ನೀಡಿದರು.

ಶ್ರಾವಸ್ತಿಗೆ ಬಂದು ಭಗವಾನರು ಕೋಷ್ಟಕ ಚೈತ್ಯದಲ್ಲಿ ನಿಂತರು. ಗೋಶಾಲರೂ ಇಲ್ಲಿಯ ಕುಂಬಾರ ಶಾಲೆಯಲ್ಲಿ ನಿಂತಿದ್ದರು. ಇಪ್ಪತ್ನಾಲ್ಕು ವರ್ಷಗಳ ಕಠೋರ ಸಾಧನೆಯ ನಂತರ ಗೋಶಾಲರಿಗೆ ಜ್ಞಾನೋದಯವಾಗಿತ್ತು. ಆರು ವರ್ಷ ಮಹಾವೀರರ ಸಹವಾಸದಲ್ಲಿಯೇ ಕಳೆದು ನಂತರ ಇಬ್ಬರೂ ಬೇರೆ ಬೇರೆ ದಾರಿ ಹಿಡಿದವರಾಗಿದ್ದರು- ಹೀಗೆ ಎರಡು ವರ್ಷಗಳ ವರೆಗೆ ಗೋಶಾಲರು ಪ್ರತ್ಯೇಕವಾಗಿದ್ದರು. ಆ ನಂತರ, 16 ವರ್ಷಗಳ ತರುವಾಯ, 'ಜಿನ'ಪದ ಧಾರಣ ಮಾಡಿ, ತಮ್ಮದೇ ಆದ ಪ್ರತ್ಯೇಕ ಸಂಘವನ್ನು ಸ್ಥಾಪಿಸಿ, ಆ ಜೀವಿಕ ಸಿದ್ಧಾಂತಗಳನ್ನು ಜನರಿಗೆ ಬೋಧಿಸುತ್ತ ಶ್ರಾವಸ್ತಿಯಲ್ಲೀಗ ಸಂಚಾರಗೈಯುತ್ತಿದ್ದರು.

ಗೋಶಾಲರು ತಮ್ಮಷ್ಟಕ್ಕೆ ತಾವೆ 'ಜಿನ' ಎಂದು ಘೋಷಿಸಿಕೊಂಡ ಸಮಾಚಾರ ಮಹಾವೀರರಿಗೆ ತಲುಪಿದಾಗ ವಿಸ್ಮಯವಾಯಿತು. 'ಅದೆಂತು ಸಾಧ್ಯ?' ಎಂದು ಅವರು ಪ್ರಶ್ನಿಸಿದರು. ಈ ಪ್ರಶ್ನೆಯನ್ನು ಕೇಳಿ ಗೋಶಾಲರು ಸಿಡಿಮಿಡಿಗೊಂಡರು. ಭಿಕ್ಷಾಪಾತ್ರೆಯೊಡನೆ ಊರಲ್ಲಿ ಹೊರಟ ಮಹಾವೀರರ ಶಿಷ್ಯ ಆನಂದಮುನಿಯೆದುರು ಗೋಶಾಲರು ಗರ್ಜಿಸಿದರು : "ನಿಮ್ಮ ಗುರು ನನ್ನ ಬಗೆಗೇನಾದರೂ ಹೇಳಿದರೆ, ನನ್ನ ತೇಜೋಬಲದಿಂದ ಅವರನ್ನು ಭಸ್ಮಗೊಳಿಸಿಬಿಟ್ಟೇನು!"

ಆನಂದಮುನಿಯ ಮೂಲಕ ಈ ಮಾತು ಮಹಾವೀರರಿಗೆ ತಲುಪಿತು. ಅವರೆಂದರು : "ಅದರೊಳಗೇನೂ ಸಂದೇಹವಿಲ್ಲ. ಗೋಶಾಲರು ಪಾಷಾಣಮಯ ಮಾರಣ ಮಹಾಯಂತ್ರದಾಘಾತದಂತೆ ತಮ್ಮ ತೇಜೋಬಲವನ್ನು ಬಳಸಿ ಬೇಕಾದವರನ್ನೂ ಭಸ್ಮಗೊಳಿಸಿಬಿಡಬಲ್ಲರು. ಅಂಗ, ವಂಗ, ಮಗಧ, ಮಲಯ, ಮಾಳವ-ಮುಂತಾದ ಹದಿನಾರು ಜನಪದಗಳನ್ನೂ ಅವರು ತಮ್ಮ ತೇಜೋಬಲದಿಂದ ಸುಟ್ಟುಹಾಕಲೂ ಬಲ್ಲರು. ಆದರೆ ಅವರು ನನಗೇನೂ ಮಾಡುವುದು ಸಾಧ್ಯವಿಲ್ಲ." ಆದರೂ ಗೋಶಾಲರೊಡನೆ ಕಾಲ್ಕೆದರಿ ಜಗಳಕ್ಕಿಳಿಯದಂತೆ ಮಹಾವೀರರು ತಮ್ಮ ಶಿಷ್ಯರಿಗೆಲ್ಲ ಎಚ್ಚರಿಕೆ ನೀಡಿದರು.

ತಮ್ಮ ಮಾತಿನ ಬಗೆಗೆ- ಮಹಾವೀರರ ಕಡೆಯಿಂದ ಯಾವ ಪ್ರತಿ ಕ್ರಿಯೆಯೂ ಬರಲಿಲ್ಲವಲ್ಲ ಎಂದು ಗೋಶಾಲರು ತಮ್ಮ ಶಿಷ್ಯವೃಂದಸಮೇತರಾಗಿ ಕೋಷ್ಟಕವಿಹಾರ

(ಚೈತ್ಯ)ಕ್ಕೇ ಬಂದುಬಿಟ್ಟರು. ಮಹಾವೀರರನ್ನು ಕುರಿತು ಅವರೆಂದರು- "ಹೇ, ಆಯುಷ್ಯವಂತ ಕಾಶ್ಯಪಗೋತ್ರ-ಸಂಜಾತರೇ, ನೀವು ನಿಮ್ಮ ಶಿಷ್ಯನೆಂದು ಭಾವಿಸಿಕೊಂಡಿರಬಹುದಾದ ಗೋಶಾಲನು ಎಂದೋ ಸತ್ತುಹೋಗಿದ್ದಾನೆ. ಅದು ಏಳು ಭವಗಳ ಹಿಂದಿನ ಮಾತು. ನಾನು ಈ ಶ್ರಾವಸ್ತಿಯ ಕುಂಬಾರ ಶಾಲೆಯಲ್ಲಿ ಕಳೆದ ಹದಿನಾರು ವರ್ಷಗಳಿಂದ ವಾಸವಾಗಿದ್ದೇನೆ. ನನ್ನ ಹೆಸರು ಮಂಖಲಿಪುತ್ರ ಗೋಶಾಲಕ! ಗೊತ್ತೇ?"

ಮಹಾವೀರರೆಂದರು-

"ಗೊತ್ತು, ಇದು ನಿನ್ನ ವ್ಯರ್ಥಾಲಾಪವೆಂಬುದೂ ಗೊತ್ತು."

ಈ ಮಾತು ಕೇಳುತ್ತಲೇ ಗೋಶಾಲರು ಕಿಡಿಕಿಡಿಯಾದರು. ಅವರು ಥಟ್ಟನೇ ತೇಜೋಲೇಶ್ಯೆಯಿಂದ ಮಹಾವೀರರ ಮೇಲೆ ದಾಳಿಗೈದರು. ಗೋಶಾಲರು ಅರಚಿದರು- "ಈ ನನ್ನ ತೇಜದಿಂದ ನೀವು ನಷ್ಟರಾಗಿ ಹೋಗುತ್ತೀರಿ. ಪಿತ್ತ-ಜ್ವರದಿಂದ ಬಳಲಿ ಆರು ತಿಂಗಳೊಳಗಾಗಿ ಕಾಲನ ದವಡೆಗೆ ಬಲಿಯಾಗುತ್ತೀರಿ!" ಮಹಾವೀರರು ಉತ್ತರವಿತ್ತರು : "ಓ, ಗೋಶಾಲಕ ಮಹಾಶಯಾ, ನಿನ್ನ ಈ ತೇಜೋಲೇಶ್ಯೆ ನನಗೇನೂ ಕೇಡು ಮಾಡಲಾರದು. ನಾನಿನ್ನೂ ಹದಿನಾರು ವರ್ಷ ಬದುಕಿರುತ್ತೇನೆ. ಆದರೆ, ನೀನು ಮಾತ್ರ ನಿನ್ನ ತೇಜದಲ್ಲಿ ನೀನೇ ಸುಟ್ಟುಹೋಗುತ್ತೀಯಾ, ಏಳು ರಾತ್ರಿಗಳೊಳಗಾಗಿ ನೀನು ಹೇಳ ಹೆಸರಿಲ್ಲದಂತಾಗುತ್ತೀಯಾ!"

ಶಾಸ್ತ್ರಗಳ ಪ್ರಕಾರ ಮಹಾವೀರರ ಭವಿಷ್ಯವಾಣಿ ದಿಟವಾಗಿಯೇ ಪರಿಣಮಿಸಿತು. ತಮ್ಮ ಅಂತಿಮಕಾಲ ಹತ್ತಿರವಾದುದನ್ನು ತಿಳಿದ ಗೋಶಾಲರು ತಮ್ಮ ಶಿಷ್ಯರನ್ನು ಕರೆದು ಇಂತೆಂದರು: "ನನ್ನ ಶಿಷ್ಯಂದಿರೇ, ನನ್ನ ಮೃತ್ಯುವಿನ ನಂತರ ನನ್ನ ಶರೀರಕ್ಕೆ ಚಂದನಲೇಪಿಸಿ, ಬಹು ಮೌಲ್ಯ ವಸ್ತ್ರಾಭೂಷಣಗಳೊಂದಿಗೆ ಪಲ್ಲಕ್ಕಿಯಲ್ಲಿರಿಸಿ, ಶ್ರಾವಸ್ತಿಯಲ್ಲಿ ಮೆರವಣಿಗೆ ತೆಗೆದು '24ನೆಯ ತೀರ್ಥಂಕರ ಗೋಶಾಲರು ಸಮಸ್ತ ದುಃಖಗಳನ್ನೂ ಗೆದ್ದು ಸಿದ್ಧರೆನಿಸಿದರು' ಎಂದು ಘೋಷಿಸಲು ಮರೆಯಬಾರದು!"

ತದನಂತರ ಮಹಾವೀರರು ಶ್ರಾವಸ್ತಿಯಿಂದ ಹೊರಟು ಮೇಂಢಿಯ ಗ್ರಾಮಕ್ಕೆ ಬಂದು, ಸಾಣಕೋಷ್ಟಕಚೈತ್ಯದಲ್ಲಿ ಇಳಿದುಕೊಂಡರು. ಅವರ ಶರೀರದಲ್ಲೊಂದು ತೀವ್ರ ದಾಹವಾಗಲಾರಂಭಿಸಿತು; ರಕ್ತಭೇದಿ ಪ್ರಾರಂಭವಾಯಿತು. ಗೋಶಾಲರ ತಪೋತೇಜದಿಂದಾಗಿ ಹೀಗಾಗಿದ್ದು ಮಹಾವೀರರು ಶೀಘ್ರವೇ ಕಾಲವಶರಾಗಬಹುದೆಂದು ಜನರು ಗಾಳಿಮಾತು ಹರಡಿದರು. ಅದನ್ನು ಕೇಳಿ ಅವರ ಶಿಷ್ಯರು ದುಃಖಿಸಲಾರಂಭಿಸಿದರು. "ಯಾರೂ ಚಿಂತೆ ಮಾಡುವ ಕಾರಣವಿಲ್ಲ; ನಾನಿನ್ನೂ ಹದಿನಾರು ವರುಷ ಜೀವದಿಂದಿರುವವನಿದ್ದೇನೆ" ಎಂದು ಮಹಾವೀರರು ಸಕಲರಿಗೂ ಸಾಂತ್ವನ ನೀಡಿದರು. ಶ್ರಾವಕಿ ರೇವತಿಯ ಮನೆಯಿಂದ ಬಂದ ಭಿಕ್ಷಾನ್ನ ಸೇವಿಸಿದ ತರುವಾಯ ಮಹಾವೀರರ ಆರೋಗ್ಯ ಸುಧಾರಿಸಿತು.[1]

ಮೇಂಢಿಯ ಗ್ರಾಮದಿಂದ ಮಹಾವೀರರು ಮಿಥಿಲೆಗೆ ಪ್ರಯಾಣ ಬೆಳೆಸಿದರು. ಅಲ್ಲಿ ಮತ್ತೆ ಇಪ್ಪತ್ತೇಳನೆಯ-ಕೈವಲ್ಯಾವಸ್ಥೆಯ ತರುವಾಯದ ಹದಿನೈದನೆಯ-ಚಾತುರ್ಮಾಸ ಆಚರಿಸಿದರು.

---

1. ಭಗವತೀಸೂತ್ರ (15)
2. ಭಗವತೀಸೂತ್ರ (11-9)

### ಇಪ್ಪತ್ತೆಂಟನೆಯ ಚಾತುರ್ಮಾಸ

ಭಗವಾನ ಮಹಾವೀರರು ಶ್ರಾವಸ್ತಿ, ಅಹಿಚ್ಛತ್ರಾ, ಹಸ್ತಿನಾಪುರ ಇತ್ಯಾದಿ ನಗರಗಳನ್ನು ಸಂದರ್ಶಿಸಿದರು. ಈ ಮೊದಲೇ ಉಲ್ಲೇಖಿಸಿದಂತೆ, ಶ್ರಾವಸ್ತಿಯಲ್ಲಿ ಮಹಾವೀರರ ಶಿಷ್ಯ ಗೌತಮ ಇಂದ್ರಭೂತಿ ಮತ್ತು ಪಾರ್ಶ್ವನಾಥರ ಶಿಷ್ಯ ಕೇಶೀಕುಮಾರರ ನಡುವೆ ಸಂಭಾಷಣೆ ನಡೆಯಿತು. ಊರಿಂದೂರಿಗೆ ಭೇಟಿ ನೀಡುತ್ತ ಮಹಾವೀರರು ಹಸ್ತಿನಾಪುರ ತಲುಪಿದರು. ಇಲ್ಲಿಯ ದೊರೆ ಶಿವರಾಜನು ಮಹಾವೀರರಿಂದ ಶ್ರಮಣ ಧರ್ಮದೀಕ್ಷೆ ಸ್ವೀಕರಿಸಿ, ಮುಂದೆ ರಾಜರ್ಷಿ ಎಂದು ಹೆಸರಾದನು.[2]

ಅಲ್ಲಿಂದ ಭಗವಾನ ಮಹಾವೀರರು ವಾಣಿಜ್ಯ ಗ್ರಾಮಕ್ಕೆ ನಡೆದರು. ಅಲ್ಲಿ ಅವರ ಇಪ್ಪತ್ತೆಂಟನೆಯ ಚಾತುರ್ಮಾಸ ಕಳೆಯಿತು. ಕೇವಲ ಜ್ಞಾನಪ್ರಾಪ್ತಿಯ ನಂತರದ ಹದಿನಾರನೆಯ ಚಾತುರ್ಮಾಸ ಅದಾಗಿತ್ತು.

### ಇಪ್ಪತ್ತೊಂಬತ್ತನೆಯ ಚಾತುರ್ಮಾಸ

ಮಹಾವೀರರ ಇಪ್ಪತ್ತೊಂಬತ್ತನೆಯ ಚಾತುರ್ಮಾಸ ರಾಜಗೃಹದಲ್ಲಿ ಕಳೆಯಿತು. ಅದು ಅವರ ಕೈವಲ್ಯಾವಸ್ಥೆಯ ನಂತರದ ಹದಿನೇಳನೆಯ ಚಾತುರ್ಮಾಸ.

### ಮೂವತ್ತನೆಯ ಚಾತುರ್ಮಾಸ

ರಾಜಗೃಹದಿಂದ ಚಂಪಾಕ್ಕೆ ತೆರಳಿ, ಅಲ್ಲಿ ಸಾಲ-ಮಹಾಸಾಲರೆಂಬ ಯುವರಾಜ-ಬಂಧುಗಳಿಗೆ ದೀಕ್ಷೆ ನೀಡಿದರು. ದಶಾರ್ಣದಲ್ಲಿ ದಶಾರ್ಣಭದ್ರ ದೊರೆಗೆ ದೀಕ್ಷಾದಾನ ಮಾಡಿದರು. ಅಲ್ಲಿಂದ ವಿದೇಹಕ್ಕೆ ಹೊರಟರು. ವಾಣಿಜ್ಯ ಗ್ರಾಮವಾಸಿಯೂ ಬ್ರಾಹ್ಮಣಶಾಸ್ತ್ರವೇತ್ತನೂ ಆಗಿದ್ದ ಸೋಮಿಲ ಬ್ರಾಹ್ಮಣನ ಸಂದೇಹಗಳನ್ನು ನಿವಾರಿಸಿದ ಕಾರಣ ಅವನು ಮಹಾವೀರರ ಉಪದೇಶದಂತೆ ಶ್ರಮಣೋಪಾಸಕನಾದನು. ಸೋಮಿಲನು ಮಹಾವೀರರೆದುರು ಮಂಡಿಸಿದ ಮುಖ್ಯ ಸಂದೇಹವೆಂದರೆ- "ಸಾಸಿವೆ ಭಕ್ಷ್ಯವೋ ಅಭಕ್ಷ್ಯವೋ?"

ಮಹಾವೀರರು ಉತ್ತರಿಸಿದರು :

"ಸಾಸಿವೆಯ ಅರ್ಥ 'ಸಾಹಸಿ'ಯೆಂಬುದಾದರೆ ಅದು ಅಭಕ್ಷ್ಯ ; ಮತ್ತೆ ಸಾಸಿವೆ ಕಾಳೆಂದಾದರೆ ಭಕ್ಷ್ಯವೇ"[1]

ಮಹಾವೀರರು ಇಲ್ಲಿ ತಮ್ಮ 30ನೆಯ ಅಂದರೆ ಕೇವಲ ಜ್ಞಾನಪ್ರಾಪ್ತಿಯ ನಂತರದ ಹದಿನೆಂಟನೆಯ ಚಾತುರ್ಮಾಸ ಕಳೆದರು.

---

1. ಭಗವತೀಸೂತ್ರ (18-10)

## ಮೂವತ್ತೊಂದನೆಯ ಚಾತುರ್ಮಾಸ

ಮಹಾವೀರರು ಕೋಶಲ-ಪಾಂಚಾಲದ ಮೇಲಿಂದ ಹಾಯ್ದು, ಸಾಕೇತ, ಶ್ರಾವಸ್ತಿ ಕಾಂಪಿಲ್ಯಪುರ ಮುಂತಾದ ನಗರಗಳನ್ನು ಸಂದರ್ಶಿಸಿ, ವೈಶಾಲಿಗೆ ಬಂದು ತಲುಪಿದರು. ಇಲ್ಲಿ ಅವರು ತಮ್ಮ ಮೂವತ್ತೊಂದನೆಯ-ಕೈವಲ್ಯಾವಸ್ಥೆಯ ನಂತರದ ಹತ್ತೊಂಬತ್ತನೆಯ ಚಾತುರ್ಮಾಸ ಆಚರಿಸಿದರು.

## ಮೂವತ್ತೆರಡನೆಯ ಚಾತುರ್ಮಾಸ

ವಿದೇಹ, ಕೋಶಲ ಮತ್ತು ಕಾಶೀ ಪ್ರದೇಶಗಳಲ್ಲಿ ಸಂಚರಿಸಿ ಮಹಾವೀರರು ಮತ್ತೆ ವೈಶಾಲಿಗೆ ಬಂದು ತಮ್ಮ ಮೂವತ್ತೆರಡನೆಯ ಚಾತುರ್ಮಾಸ ಆಚರಿಸಿದರು. ಅದು ಅವರ ಕೈವಲ್ಯಾವಸ್ಥೆಯ ನಂತರದ ಇಪ್ಪತ್ತನೆಯ ಚಾತುರ್ಮಾಸ. ವಾಣಿಜ್ಯ ಗ್ರಾಮವೆಂದರೆ ವೈಶಾಲಿಯದೇ ಒಂದು ಭಾಗ-ಎರಡೂ ಭಾಗಗಳ ನಡುವೆ ಗಂಡಕ ನದಿ. ಈ ವಾಣಿಜ್ಯ ಗ್ರಾಮದಲ್ಲಿ ಪಾರ್ಶ್ವಾಪತ್ಯ ಗಾಂಗೇಯ ಶ್ರಮಣರು ಮಹಾವೀರರನ್ನು ಸಂಧಿಸಿದ ಬಗ್ಗೆ ಈ ಮೊದಲೇ ಉಲ್ಲೇಖಿಸಲಾಗಿದೆ.

## ಮೂವತ್ತೂರನೆಯ ಚಾತುರ್ಮಾಸ

ಭಗವಾನ ಮಹಾವೀರರು ಮಗಧದ ಕಡೆಗೆ ಪಾದಬೆಳೆಸಿ ರಾಜಗೃಹ ತಲುಪಿದರು. ಅಲ್ಲಿಂದ ಚಂಪಾಕ್ಕೆ ಪ್ರಯಾಣ. ಮತ್ತೆ ರಾಜಗೃಹಕ್ಕೆ ಮರು ಪ್ರಯಾಣ. ತನಗೆ ಕೇವಲ ಜ್ಞಾನಪ್ರಾಪ್ತಿಯಾಗಲಿಲ್ಲವೆಂದು ಗೌತಮನ ಮನದಲ್ಲಿ ಮೂಡಿದ ಸಂದೇಹವನ್ನು ಪರಿಹರಿಸಿದರು. ಕಾಲೋದಾಯಿಗೆ ಶ್ರಮಣದೀಕ್ಷೆ ನೀಡಿದರು.[1] ರಾಜಗೃಹದಲ್ಲಿ ಭಗವಾನರು ಮತ್ತು ಚಾತುರ್ಮಾಸ ಆಚರಿಸಿದರು. ಅದು ಅವರ ಮೂವತ್ತೂರನೆಯ ಅಂದರೆ ಕೈವಲ್ಯಪ್ರಾಪ್ತಿಯ ನಂತರದ ಇಪ್ಪತ್ತೊಂದನೆಯ ಚಾತುರ್ಮಾಸ.

## ಮೂವತ್ನಾಲ್ಕನೆಯ ಚಾತುರ್ಮಾಸ

ರಾಜಗೃಹದಿಂದ ಆಗ್ನೇಯ ದಿಕ್ಕಿನಲ್ಲಿರುವ ನಾಲಂದಾ ರಾಜಗೃಹದ ಉಪನಗರವೇ ಆಗಿತ್ತು. ಭಗವಾನ ಮಹಾವೀರರು ನಾಲಂದಾದಲ್ಲಿಯ ಸಂಚರಿಸಿದರು. ಇಲ್ಲಿ ಪಾರ್ಶ್ವನಾಥರ ಅನುಯಾಯಿ ಉದಕ ಪೇಢಾಲಪುತ್ರನು ಮಹಾವೀರರ ಪಂಚ ಮಹಾವ್ರತಗಳನ್ನು ಅಂಗೀಕರಿಸಿದನು.[2] ಮಹಾವೀರರು ಇಲ್ಲಿ ಕಳೆದದ್ದು ಅವರ ಮೂವತ್ನಾಲ್ಕನೆಯ ಅಂದರೆ ಕೈವಲ್ಯಪ್ರಾಪ್ತಿಯ ನಂತರದ ಇಪ್ಪತ್ತೆರಡನೆಯ ಚಾತುರ್ಮಾಸ.

---

1. ಭಗವತೀಸೂತ್ರ (7-10)
2. ಸೂತ್ರ ಕೃತಾಂಗ (2-7)

**ಮೂವತ್ತೈದರಿಂದ ನಾಲ್ವತ್ತೊಂದರವರೆಗೆ**

ಭಗವಾನ ಮಹಾವೀರರ ಮೂವತ್ತೈದನೆಯ ಚಾತುರ್ಮಾಸವು ವೈಶಾಲಿಯಲ್ಲಿ, ಮೂವತ್ತಾರನೆಯದು ಮಿಥಿಲೆಯಲ್ಲಿ, ಮೂವತ್ತೇಳನೆಯದು ರಾಜ ಗೃಹದಲ್ಲಿ, ಮೂವತ್ತೆಂಟನೆಯದು ನಾಲಂದಾದಲ್ಲಿ, ಮೂವತ್ತೊಂಬತ್ತನೆಯದು ಮತ್ತೆ ಮಿಥಿಲೆಯಲ್ಲಿ, ನಾಲ್ವತ್ತನೆಯದೂ ಮಿಥಿಲೆಯಲ್ಲಿ, ನಾಲ್ವತ್ತೊಂದನೆಯದು ರಾಜಗೃಹದಲ್ಲಿ ಕಳೆಯಿತು.[1]

ಹೀಗೆ ಭಗವಾನ ಮಹಾವೀರರು ತಮ್ಮ ಕೈವಲ್ಯಾವಸ್ಥೆಯಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸುತ್ತ 30 ವರ್ಷ ಕಳೆದರು; ಕೇವಲ ಚಾತುರ್ಮಾಸಗಳ ಮಟ್ಟಿಗೆ ಅವರು ಒಂದೆಡೆಗೇ ಇರುತ್ತಿದ್ದರು. ಈ ದೀರ್ಘಾವಧಿಯಲ್ಲಿ ಅವರು ತಮ್ಮ ದಿವ್ಯವಾಣಿಯಿಂದ ಅಸಂಖ್ಯ ಸ್ತ್ರೀ-ಪುರುಷರಿಗೆ ಬೋಧಾಮೃತ ನೀಡಿ ಅವರ ಕಲ್ಯಾಣಗೈದರು. ನಿರ್ಗ್ರಂಥ ಧರ್ಮ-ಸಿದ್ಧಾಂತಗಳ ವ್ಯಾಖ್ಯೆ ನೀಡಿದರು, ಶ್ರಮಣ ಸಂಘಕ್ಕೆ ನವಚೈತನ್ಯ ತುಂಬಿದರು, ಶ್ರಮಣ ಮತ್ತು ಶ್ರಮಣಿಯರ ಜೀವನದ ನೀತಿ-ನಿಬಂಧನೆಗಳನ್ನು ಬಿಗಿಗೊಳಿಸಿದರು, ನಿರ್ಗ್ರಂಥ ಧರ್ಮದ ಪ್ರಚಾರ ಮತ್ತು ಪ್ರಸಾರಕ್ಕಾಗಿ ತಮ್ಮ ಶಿಷ್ಯರಿಗೆ ಪ್ರೇರಣೆಯಿತ್ತರು, ರಾಜ-ಮಹಾರಾಜರನ್ನೂ ರಾಣಿ-ಮಹಾರಾಣಿಯರನ್ನೂ ಯಾವ ಭೇದ-ಭಾವವನ್ನೂ ಲೆಕ್ಕಿಸದೆ ಸಾಮಾನ್ಯ ಸ್ತ್ರೀ-ಪುರುಷರನ್ನೂ ಶ್ರಮಣ ಧರ್ಮಕ್ಕೆ ದೀಕ್ಷಾಬದ್ಧಗೊಳಿಸಿದರು ಮತ್ತು ಅನೇಕಾನೇಕ ಶ್ರಾವಕ-ಶ್ರಾವಿಕೆಯರಿಗೆ ವ್ರತಧಾರಣಮಾಡಿಸಿ ನಿರ್ಗ್ರಂಥ ಧರ್ಮದ ಅನುಯಾಯಿಗಳನ್ನಾಗಿ ಮಾಡಿದರು.

ನಾಲ್ವತ್ತೊಂದನೆಯ ಚಾತುರ್ಮಾಸ ಕಳೆದನಂತರವೂ ಭಗವಾನರು ಕೆಲದಿನ ರಾಜಾಗೃಹದಲ್ಲಿಯೇ ತಂಗಿದ್ದರು. ಅಲ್ಲಿಂದ ಪ್ರಯಾಣ ಬೆಳೆಸಿ ಮಜ್ಝಿಮ ಪಾವಾಕ್ಕೆ ಆಗಮಿಸಿದರು. ಅಲ್ಲಿ ಚಾತುರ್ಮಾಸ ಕಳೆಯುವುದಕ್ಕೆ ಹಸ್ತಿಪಾಲ ದೊರೆಯ ಕುಲಕರ್ಣಿಯೊಬ್ಬರ ಕಾರ್ಯಾಲಯದಲ್ಲಿ ನಿಂತರು. ಆಗ ಅವರಿಗೆ 72ರ ವಯಸ್ಸು. 30 ವರ್ಷಗಳ ಗೃಹವಾಸ, 12 ವರ್ಷಗಳ ತಪಸ್ಸು ಮತ್ತು 30 ವರ್ಷಗಳ ಕೈವಲ್ಯಾವಸ್ಥೆ ಅವರದಾಗಿತ್ತು. ಇದೀಗ ಅವರ ಕೊನೆಯ ನಾಲ್ವತ್ತೆರಡನೆಯ ಚಾತುರ್ಮಾಸವಾಗಿತ್ತು. ಈ ಚಾತುರ್ಮಾಸದ ಮೂರು ಮಾಸಗಳುರುಳಿ ನಾಲ್ಕನೆಯ ಮಾಸದ ಕೆಲ ದಿನಗಳೂ ಕಳೆದಿದ್ದವು. ಅವರು ನಿರ್ಜಲ ಉಪವಾಸಗೈಯುತ್ತಿದ್ದರು. ಉಪದೇಶಾಮೃತದ ಧಾರೆ ಹರಿಯುತ್ತಲೇ ಇತ್ತು; ಪಾಪ-ಪುಣ್ಯಗಳ ವಿಷಯದಲ್ಲಿ ಸಾರಗರ್ಭಿತ ಬೋಧೆ ಅವರ ದಿವ್ಯ ಧ್ವನಿಯಿಂದ ನಿರಾತಂಕವಾಗಿ ನಡೆದೇ ಇತ್ತು. ಕಾರ್ತಿಕಮಾಸದ ಕೃಷ್ಣಪಕ್ಷದ ಅಮವಾಸ್ಯೆಯ ಕಾರಿಕುಳು ಧರೆಯಮೇಲೆ ಕಾಲಿಟ್ಟಿತು. ಶಿಷ್ಯ ಸಮುದಾಯವೆಲ್ಲ ಅಲ್ಲಿ ಸೇರಿತ್ತು, ಕ್ಷಣ-ಕ್ಷಣಕ್ಕೆ ಮಹಾವೀರರ ಕಾಯ, ವಾಕ್ ಮತ್ತು ಮನಸ್ಸುಗಳಲ್ಲಿ ಸ್ಥಿರತೆ ನೆಲೆಗೊಳ್ಳತೊಡಗಿತು. ಮಾತು ನಿಂತಿತು; ಸ್ಪಂದನವಿಲ್ಲದಾಯಿತು; ಅಂಗಾಂಗಗಳೆಲ್ಲ ನಿಶ್ಚಲಗೊಂಡವು. ಅವರ ಚೇತನ ಅನಂತದಲ್ಲಿ ಲೀನವಾಯಿತು. ಇದು ಅವರ ನಿರ್ವಾಣಾವಸ್ಥೆ ಸಮಸ್ತ ಕರ್ಮಗಳು ನಾಶಗೊಂಡವು, ಮಹಾಮುನಿಗಳಿಗೆ ಪರಮಪದ ಪ್ರಾಪ್ತವಾಯಿತು. ಅನಂತ ದರ್ಶನ, ಅನಂತಜ್ಞಾನ, ಅನಂತಸುಖ

---

3. ನೋಡಿ : ಗೋಪಾಲದಾಸ ಜೀವಭಾಯಿ ಪಟೇಲರ ಶ್ರೀ ಮಹಾವೀರ ಕಥಾ 1950, ಮುನಿಕಲ್ಯಾಣ ವಿಜಯ, ಶ್ರಮಣ ಭಗವಾನ ಮಹಾವೀರ, ರಲ್ಪಸೂತ್ರ (5-123), ಜಿನಪ್ರಭಸೂರಿ ಇತ್ಯಾದಿ.

ಮತ್ತು ಅನಂತರ ವೀರ್ಯಗಳ ಹೊರತಾಗಿ ಮತ್ತೊಂದರ ಹೆಸರಿಲ್ಲದ ಪರಮಪದ!

ಕಾಶಿ-ಕೋಶಲ, ಮಲ್ಲ ಮತ್ತು ಲಿಚ್ಛವಿಯ ಸಮಸ್ತ ಗಣರಾಜರಿಗೆ ಈ ವಾರ್ತೆ ತಲುಪುತ್ತಲೇ ಬಲು ವಿಜೃಂಭಣೆಯಿಂದ ನಿರ್ವಾಣಮಹೋತ್ಸವವನ್ನು ಆಚರಿಸಿದರು. ಎಲ್ಲ ಕಡೆಗಳಲ್ಲೂ ದೀಪಗಳು ಬೆಳಗಿದವು. ಈ ದೀಪಾವಳಿಯ ಬೆಳಕಿನಲ್ಲಿ ಅಮವಾಸ್ಯೆಯ ಕಾರಿರುಳಮೊಗವೂ ಕಂಗೊಳಿಸಿತು. ಇಂದಿಗೂ ಈ ಪರ್ವದಿನದ ಪುಣ್ಯಸ್ಮರಣೆಗೆಂದೇ ದೀಪಾವಳಿ ಹಬ್ಬವನ್ನಾಚರಿಸಲಾಗುತ್ತದೆ.[1]

ಮಹಾವೀರರ ನಿರ್ವಾಣ-ಸಮಾಚಾರ ಸರ್ವತ್ರ ಪಸರಿಸಿತು. ಭುವನ ಪ್ರದೀಪ ಎಂದೆಂದಿಗೂ ಆರಿಹೋಯಿತು. ಆದರೂ ಅನುಯಾಯಿಗಳ ಹೃದಯದಲ್ಲಿ ಶ್ರದ್ಧೆಯ ವಾಣಿ ಮಾರ್ದನಿಗೊಂಡಿತು : "ಜಗತ್ತಿನ ದಿವ್ಯ ವಿಭೂತಿ ಇನ್ನು ಇಲ್ಲವಾಯಿತು. ಇಡಿಯ ಲೋಕ ಶೋಭಾವಿಹೀನವಾಯಿತು. ಆದರೆ ಭಗವಾನ ಮಹಾವೀರರ ಬೋಧಾಮೃತ ಮನೆ ಮನೆಯಲ್ಲೂ ಉಳಿದೀತು!"

ಕ್ರಿ.ಶ. 527ನೆಯ ವರ್ಷದಲ್ಲಿ ನಡೆದ ಘಟನೆಯಿದು. ಅಂದರೆ ಭಗವಾನ ಮಹಾವೀರರ ನಿರ್ವಾಣವಾಗಿ ಎರಡೂವರೆ ಸಾವಿರ ವರ್ಷಗಳಾಗಿ ಹೋದವು. ಈ ಪುಣ್ಯಸ್ಮರಣೆಗಾಗಿ 2500ನೆಯ ನಿರ್ವಾಣ ಮಹೋತ್ಸವವನ್ನು ಬಲು ವಿಜೃಂಭಣೆಯಿಂದ ಆಚರಿಸಲಾಯಿತು.

---

1. ನೋಡಿ : ಕಲ್ಪಸೂತ್ರ (5.122-28); ಗಣಚಂದ್ರಗಣಿ ಮಹಾವೀರ ಚರಿಯ, ಪ್ರಾಸ್ತಾಪ (8); ಜಿನಸೇನ, ಹರಿವಂಶ ಪುರಾಣ; ಗುಣಭದ್ರ, ಉತ್ತರ ಪುರಾಣ.

# ಮಹಾವೀರ ವಾಣಿಯ ಸಂಕಲನ

ಭಗವಾನ ಮಹಾವೀರರು ತಮ್ಮ ವಾಣಿಯ ಮೂಲಕ ಯಾವ ಯಾವ ವಿಷಯಗಳ ವಿವೇಚನೆ ಮಾಡಿದರೆಂಬುದಕ್ಕೆ ವಿವರವಾದ ದಾಖಲೆಗಳೇನು ಉಪಲಬ್ಧವಿಲ್ಲ. ಆದರೆ, ಅವರು ನೀಡಿದ ಉಪದೇಶದ ಮುಖ್ಯಾಂಶಗಳು ಅವರ ಪ್ರಮುಖ ಶಿಷ್ಯರನೇಕರ ಸ್ಮರಣೆಯಲ್ಲಿ ಸುರಕ್ಷಿತವಾಗಿ ಉಳಿದು ಕೊಂಡುದು ಗಮನೀಯ ಸಂಗತಿ. ಪರಂಪರೆಯ ಪ್ರಕಾರ, ಅರ್ಹಂತ ಭಗವಾನರು ತಮ್ಮ ಗಣಧರರಿಗೆ ಮಾಡಿದ ತತ್ವಬೋಧನೆಯನ್ನು ಜೈನಮತದ ಹಿತದ ದೃಷ್ಟಿಯಿಂದ ಅವರು ಸೂತ್ರರೂಪದಲ್ಲಿ ಕಾಪಿಟ್ಟರು. ಈ ಸೂತ್ರ ಸಂಕಲನಕ್ಕೆ ಆಗಮ, ಶ್ರುತಜ್ಞಾನ ಅಥವಾ ಸಿದ್ಧಾಂತವೆಂದು ಹೆಸರಿಡಲಾಯಿತು. ಆಗಮಗಳಲ್ಲಿ ಅತ್ಯಂತ ಪ್ರಾಚೀನವಾದುದೆಂದರೆ ಅಂಗ. ಈ ಅಂಗಗಳ ಸಂಖ್ಯೆ ಹನ್ನೆರಡು. ಇವುಗಳಿಗೆ ದ್ವಾದಶಾಂಗಗಳೆಂದೂ ಹೆಸರು. ಬೌದ್ಧರ ತ್ರಿಪಿಟಕದಂತೆ ದ್ವಾದಶಾಂಗಗಳಿಗೆ ಗಣಿಪಿಟಕ ಹೆಸರು ಕೊಡಲಾಯಿತು.

ಭಗವಾನ ಮಹಾವೀರರ ವಾಣಿ ಅವರ ಗಣಧರರ ಮೂಲಕ ದ್ವಾದ ಶಾಂಗಗಳಲ್ಲಿ ಸಂಗ್ರಹಗೊಂಡಿದೆಯೆಂಬ ಸಂಗತಿಯನ್ನು ದಿಗಂಬರ ಮತ್ತು ಶ್ವೇತಾಂಬರ-ಎರಡೂ ಪಂಥಗಳು ಮನ್ನಿಸುತ್ತವೆ. ಭಗವಾನರ ಗಣಧರರ ಸಂಖ್ಯೆ ಹನ್ನೊಂದು. ಅವರೆಲ್ಲ ತಮ್ಮ ತಮ್ಮ ಶಕ್ತ್ಯಾನುಸಾರ ಈ ದ್ವಾದಶಾಂಗಗಳ ರಚನೆ ಮಾಡಿದರು. ಆದರೆ, ಭಗವಾನರ ಪ್ರಥಮ ಗಣಧರ ಗೌತಮ ಇಂದ್ರಭೂತಿ ಈ ಹನ್ನೆರಡೂ ಅಂಗಗಳ ರಚನೆ ಮಾಡಿದನೆಂದು ದಿಗಂಬರ ಪರಂಪರೆ ನಂಬಿದ್ದರೆ, ಇಂದಿಗೆ ಉಪಲಬ್ಧವಿರುವ ಹನ್ನೊಂದು ಅಂಗಗಳನ್ನು ರಚಿಸಿದಾತ ಮಹಾವೀರರ ಐದನೆಯ ಗಣಧರ ಸುಧರ್ಮಾ ಎಂದು ಶ್ವೇತಾಂಬರ ಪರಂಪರೆಯ ಭಾವನೆ.

ಆಗಮ ಗ್ರಂಥಗಳ ಮಟ್ಟಿಗೆ ಹೇಳುವುದಾದರೆ, ಅವುಗಳಲ್ಲಿ ಎಷ್ಟು ಭಾಗ ಮಹಾವೀರರದು, ಇನ್ನೆಷ್ಟು ಭಾಗ ಅವರ ನಂತರದ ಆಚಾರ್ಯರದೆಂದು ನಿಶ್ಚಿತವಾಗಿ ಹೇಳುವುದು ಕಷ್ಟ. ಮಹಾವೀರರ ನಿರ್ವಾಣದ ಕೆಲವು ಶತಮಾನಗಳವರೆಗೆ ಶ್ರುತಜ್ಞಾನ ಪರಂಪರೆಗೆ ಗುರುಮುಖವೇ ಆಧಾರವಾಗಿತ್ತು. ಹೀಗಾಗಿ, ಬರಬರುತ್ತ ಶ್ರುತಜ್ಞಾನದ ವಿಂಗಡನೆ ನಡೆದಿದ್ದರೆ ಆಶ್ಚರ್ಯವೇನಲ್ಲ. ಆಶ್ಚರ್ಯದ ಮಾತೆಂದರೆ ಶ್ರುತಜ್ಞಾನದ ಸ್ವಲ್ಪಾಂಶವಾದರೂ ಉಳಿದು ಕೊಂಡಿರುವುದು. ತತ್‌ಪರಿಣಾಮವಾಗಿ ಆಗಮಗ್ರಂಥಗಳಲ್ಲಿ ಹಲವೊಂದು ಬದಲಾವಣೆಗಳಾದುದುಂಟು, ಹೊಸ ಹೆಸರುಗಳು ಬಂದುದುಂಟು, ಅವುಗಳ ಪ್ರಭಾವ ಕಡಿಮೆಯಾಗುತ್ತ ಹೋಗಿ ಅನೇಕ ಹಳೆಯ ಪರಂಪರೆಗಳೂ ಸಂಪ್ರದಾಯಗಳೂ ಮರೆವಿನ ಪರದೆ ಸೇರುವಂತಾಗಿದೆ. ಹಲವೊಂದು ಕಡೆಗಳಲ್ಲಿ ಆಗಮಗಳ ಸೂತ್ರಗಳು ಅಸ್ಪಷ್ಟವಿರುವಂತೆ ಕಾಣುತ್ತವೆ. ಅವುಗಳ ಸ್ಪಷ್ಟೀಕರಣಕ್ಕಾಗಿ ಅನೇಕ ಟೀಕಾಕಾರರು ತಮ್ಮ ವ್ಯಾಖ್ಯೆಗಳನ್ನು ನೀಡಿದ್ದಾರೆ. ಆದರೆ ಆ ಟೀಕಾಕಾರರೇ ಒಪ್ಪಿಕೊಳ್ಳುವಂತೆ ಅದರ ಅನೇಕ ವ್ಯಾಖ್ಯೆಗಳು ಅಷ್ಟೊಂದು ಸಮಾಧಾನಕರವಾಗಿಲ್ಲ. ಆಚಾರ್ಯರನೇಕರ ಮತಭೇದಗಳೂ ಈ ಗ್ರಂಥಗಳಲ್ಲಿ ಉಲ್ಲೇಖಗೊಂಡಿವೆ. ಇದೆಲ್ಲದರ ಮೇಲಿಂದ ತಿಳಿದು

ಬರುವುದಿಷ್ಟೆ : ಆಗಮ ಸಿದ್ಧಾಂತವು ವಿಚ್ಛಿನ್ನಗೊಂಡ ಕಾರಣ ಪ್ರಾಚೀನ ಜೈನ ಸಾಹಿತ್ಯಕ್ಕೆ ಸಾಕಷ್ಟು ನಷ್ಟವಾಗಿದೆ.

ವರ್ತಮಾನ ಕಾಲದಲ್ಲಿ ಉಪಲಬ್ಧವಿರುವ ಆಗಮ ಸಾಹಿತ್ಯ ಕೇವಲ ಶ್ವೇತಾಂಬರ ಪರಂಪರೆಯಲ್ಲಿ ಮನ್ನಣೆ ಪಡೆದದ್ದು. ಅದಕ್ಕೆ ದಿಗಂಬರ ಪರಂಪರೆಯ ಮನ್ನಣೆಯಿಲ್ಲ. ದಿಗಂಬರ ಪಂಥದ ಪ್ರಕಾರ, ಗುರು-ಶಿಷ್ಯ ಪರಂಪರೆಯಲ್ಲಿ ಒಬ್ಬರಿಂದಿನ್ನೊಬ್ಬರಿಗೆ ಮೌಖಿಕವಾಗಿ ಹರಿದುಬರುತ್ತಿದ್ದ ಮಹಾವೀರರ ಉಪದೇಶವು ಕಾಲಕ್ರಮೇಣ ಲುಪ್ತವಾಗಿ ಹೋಯಿತು. ಆದರೆ ದ್ವಾದಶಾಂಗದ ಕೆಲ ಅಂಶ ಅಗ್ರಾಯಣೀಪೂರ್ವದ ಕರ್ಮ-ಪ್ರಕೃತಿ ಅಧಿಕಾರ ಬಲ್ಲಿದರಾಗಿದ್ದ ಆಚಾರ್ಯ ಧರಸೇನರ ಸ್ಮರಣೆಯಲ್ಲಿತ್ತು. ಪರಂಪರಾಗತ ಶ್ರುತಜ್ಞಾನ ಅಳಿಸಿಹೋಗಬಾರದೆಂಬುದೇ ಇವರ ಉದ್ದೇಶವಾಗಿತ್ತು. ಅಂತೆಯೇ ಮಹಾವೀರ ನಿರ್ವಾಣದ ಬಳಿಕ 614-83ರ ಕಾಲಾವಧಿಯಲ್ಲಿ ಅವರು ತಮ್ಮ ಇಬ್ಬರು ಮೇಧಾವಿ ಶಿಷ್ಯರಾಗಿದ್ದ ಪುಷ್ಪದಂತ ಮತ್ತು ಭೂತಬಲಿ ಇವರಿಗೆ ಈ ಸಿದ್ಧಾಂತವನ್ನು ಕಲಿಸಿಕೊಟ್ಟರು. ಅವರಿಬ್ಬರೂ ಮುಂದೆ ದ್ರಾವಿಡ ದೇಶಕ್ಕೆ ಹೋಗಿ ಷಟ್ ಖಂಡಾಗಮದ ರಚನೆ ಮಾಡಿದರು. ದಿಗಂಬರ ಸಂಪ್ರದಾಯದ ಪ್ರಕಾರ ಷಟ್‌ಖಂಡಾಗಮದಲ್ಲಿ ಹನ್ನೆರಡನೆಯ ಅಂಗವೆನಿಸಿದ ದೃಷ್ಟಿವಾದದ ಕೆಲವಂಶ ಸುರಕ್ಷಿತವಾಗಿದೆ. ದೃಷ್ಟಿವಾದದಲ್ಲಿ ಹದಿನಾಲ್ಕು ಪರ್ವಗಳೂ ಅಡಕಗೊಂಡಿವೆ. ಕ್ರಿ.ಶ. ಮೊದಲನೆಯ ಅಥವಾ ಎರಡನೆಯ ಶತಕದ್ದೆಂದು ಭಾವಿಸಲಾದ ಈ ಆಗಮವೇ ಅತ್ಯಂತ ಪ್ರಾಚೀನವೆಂಬ ಗ್ರಹಿಕೆ ದಿಗಂಬರ ಸಂಪ್ರದಾಯದಲ್ಲಿದೆ. ಶ್ವೇತಾಂಬರ ಸಂಪ್ರದಾಯದಲ್ಲಿ ದಶವೈಕಾಲಿಕ ಸೂತ್ರದ ಕೊಂಚ ಅಧ್ಯಯನ ಮತ್ತು ಓಘನಿರ್ಯುಕ್ತಿ, ಬೃಹತ್‌ಕಲ್ಪ, ನಿಶೀಥ, ವ್ಯವಹಾರ ಮುಂತಾದವುಗಳ ಕೆಲವಂಶಗಳು ಆಗಮ ಗ್ರಂಥಗಳಿಗಿಂತಲೂ ಪೂರ್ವ ಗ್ರಂಥಗಳಿಂದ ಉದ್ಧೃತವಾದವುಗಳೆಂಬ ತಿಳುವಳಿಕೆಯುಂಟು.

## ಜೈನ ಆಗಮಗಳ ಸಂಕಲನ

ಬೌದ್ಧ ತ್ರಿಪಿಟಗಳನ್ನು ಸಂಕಲನಗೊಳಿಸಲು ಬೌದ್ಧ ಭಿಕ್ಷುಗಳ ಮೂರು ಸಂಗೀತಗಳನ್ನು ಏರ್ಪಡಿಸಿದಂತೆ ಜೈನ ಆಗಮಗಳನ್ನು ಸುವ್ಯವಸ್ಥಿತಗೊಳಿಸಲು ಜೈನ ಶ್ರಮಣರ ಮೂರು ಸಮ್ಮೇಳನಗಳನ್ನು ಏರ್ಪಡಿಸಿದ ಸಂಗತಿಯ ಉಲ್ಲೇಖ ಜೈನ ಗ್ರಂಥಗಳಲ್ಲಿ ದೊರೆಯುತ್ತದೆ. ಮೊದಲನೆಯ ಸಮ್ಮೇಲನವು ಮಹಾವೀರ-ನಿರ್ವಾಣದ 160 ವರ್ಷಗಳ ನಂತರ (ಕ್ರಿ.ಪೂ. 363 ಪಾಟಲೀಪುತ್ರ (ಪಾಟನಾ)ದಲ್ಲಿ ಸೇರಿತ್ತು. ಮೌರ್ಯ ಸಾಮ್ರಾಟ್ ಚಂದ್ರ ಗುಪ್ತನ ಕಾಲದಲ್ಲಿ ಮಗಧದಲ್ಲೊಂದು ಭೀಕರ ಅಭಾವ ಪರಿಸ್ಥಿತಿಯುಂಟಾಯಿತು. ಆದರಿಂದಾಗಿ ಆಚಾರ್ಯ ಭದ್ರ ಬಾಹುಗಳ ನೇತೃತ್ವದಲ್ಲಿ ಅನೇಕ ಜೈನ ಸಾಧುಗಳು ಬೇರೆ ಕಡೆಗೆ ಪ್ರಯಾಣ ಬೆಳೆಸಿದರು. ಕೆಲವು ಸಾಧುಗಳು ಸ್ಥೂಲಭದ್ರರ ನೇತ್ರತ್ವದಲ್ಲಿ ಅಲ್ಲಿಯೇ ಉಳಿದುಕೊಂಡರು. ಅಭಾವ ಪರಿಸ್ಥಿತಿ ಸುಧಾರಿಸಿದ ಬಳಿಕ ಪಾಟಲೀಪುತ್ರದಲ್ಲಿ ಜೈನ ಸಾಧುಗಳದೊಂದು ಸಮ್ಮೇಳನ ಜರುಗಿತು. ದ್ವಾದಶಾಂಗಗಳ ವಿವಿಧ ಅಂಶಗಳನ್ನು ನೆನಪಿನಲ್ಲಿಟ್ಟ ಸಾಧುಗಳ ಸಹಾಯದಿಂದ ಅವುಗಳಿಗೆ ವ್ಯವಸ್ಥಿತ ರೂಪ ಕೊಡುವ ಪ್ರಥಮ ಸಂಘಟಿತ ಪ್ರಯತ್ನ ನಡೆಯಿತು. ಈ ಪ್ರಯತ್ನದ ಫಲವಾಗಿ ಹನ್ನೊಂದು ಅಂಗಗಳ ಸಂಕಲನ ಕಾರ್ಯ ನಡೆಯಿತು (ಹನ್ನೆರಡನೆಯ ಅಂಗ-ದೃಷ್ಟಿವಾದ-

ಯಾರ ಸ್ಮರಣೆಯಲ್ಲಿರಲಿಲ್ಲ, ಆದ್ದರಿಂದ ಅದರ ಸಂಕಲನ ಕಾರ್ಯ ಉಳಿದುಕೊಂಡಿತು). ಅದಕ್ಕೆ ಪಾಟಲೀಪುತ್ರ ವಾಚನಾ ಎಂದು ಹೇಳುತ್ತಾರೆ.

ಅದಾಗಿ, ಮಹಾವೀರ-ನಿರ್ವಾಣದ ನಂತರ 827-40 (ಕ್ರಿ.ಶ. 300-313)ರ ವರ್ಷಾವಧಿಯಲ್ಲಿ ಮತ್ತೊಮ್ಮೆ ಈ ಆಗಮಗಳ ಸಂಕಲನ ಕಾರ್ಯ ಕೈಕೊಳ್ಳುವ ವಿಚಾರಕ್ಕೆ ಚಾಲನೆ ದೊರೆಯಿತು. ಅಭಾವ ಪರಿಸ್ಥಿತಿಯಿಂದಾಗಿ ಆಗಲೇ ಆಗ ಮಗಳಿಗೆ ಸಾಕಷ್ಟು ಹಾನಿ ತಟ್ಟಿತ್ತು. ಈ ಅಭಾವ ಪರಿಸ್ಥಿತಿ ಸುಧಾರಿಸಿದ ಬಳಿಕ ಆರ್ಯ ಸ್ಕಂದಿಲರ ನೇತೃತ್ವದಲ್ಲಿ ಮಥುರಾದಲ್ಲಿ ಎರಡನೆಯ ಸಮ್ಮೇಳನ ಸೇರಿತು. ಯಾರ-ಯಾರ ಸ್ಮರಣೆಯಲ್ಲಿ ಎಷ್ಟೆಷ್ಟು ಅಂಶಗಳಿದ್ದವೋ ಅವುಗಳ ಸಂಕಲನ ಕಾರ್ಯ ಈ ಸಮ್ಮೇಳನದಲ್ಲಿ ನಡೆಯಿತು. ಇದಕ್ಕೆ 'ಮಾಥುರೀ ವಾಚನಾ' ಎಂದು ಹೆಸರು ಬಂತು. ಸಧ್ಯಕ್ಕೆ ದೊರೆಯುವ ಆಗಮಸಾಹಿತ್ಯದ ಅನೇಕ ಭಾಗಗಳು ಈ 'ಮಾಥುರೀ ವಾಚನಾ' ವನ್ನೇ ಆಧರಿಸಿಕೊಂಡಿವೆ. ಆದ್ದರಿಂದ ಈ ವಾಚನಾ ತುಂಬಾ ಮಹತ್ವದ್ದೆಂದು ಪರಿಗಣಿಸಲ್ಪಟ್ಟಿದೆ.

ಈ ಆಗಮಗಳಿಗೆ ಮತ್ತಿಷ್ಟು ವ್ಯವಸ್ಥಿತ ರೂಪವನ್ನೀಯಬೇಕೆಂಬ ಉದ್ದೇಶದಿಂದ ಮಾಥುರೀ ವಾಚನಾದ ಅನುಯಾಯಿ ಮತ್ತು ಪ್ರತಿಭಾ ಸಂಪನ್ನರಾದ ಆಚಾರ್ಯ ದೇವಾಧಿ ಗಣಿ ಕ್ಷಮಾ ಶ್ರಮಣ ಅವರ ನೇತೃತ್ವದಲ್ಲಿ ಸೌರಾಷ್ಟ್ರದ ವಲಭಿಯಲ್ಲಿ (ವಳಾ) ಮೂರನೆಯ ಸಮ್ಮೇಳನ ಸೇರಿಸಲಾಯಿತು. ಈ ಸಮ್ಮೇಳನದ ಅವಧಿ ಮಹಾವೀರ-ನಿರ್ವಾಣದ ನಂತರದ 980-993 (ಕ್ರಿ.ಶ. 453-66) ವರ್ಷಗಳದು. ಬೇರೆ ಬೇರೆ ವಾಚನಾಗಳನ್ನಾಧರಿಸಿ ರೂಪಗೊಂಡಿದ್ದ ಆಗಮ ಸಾಹಿತ್ಯದಲ್ಲಿ ಕಂಡು ಬರುತ್ತಿದ್ದ ವಿಸಂಗತಿಗಳನ್ನು ಸಮಗೊಳಿಸುವ ಪ್ರಶ್ನೆ ಜೈನ ಶ್ರಮಣರ ಎದುರಿಗಿತ್ತು. ಈ ಮೂರನೆಯ ಸಮ್ಮೇಳನದಲ್ಲಿ ಮುಖ್ಯವಾಗಿ ಮಾಥುರೀ ವಾಚನಾದ ಆಧಾರದ ಮೇಲಿಂದ ವಿವಿಧ ವಾಚನಾ-ಭೇದಗಳನ್ನೂ ಪಾಠ-ಭೇದಗಳನ್ನೂ ಸಮನ್ವಯಗೊಳಿಸುವ ಪ್ರಯತ್ನಗೈಯ್ಯಲಾಯಿತು. ಅಷ್ಟೇ ಅಲ್ಲದೆ, ಸಮಸ್ತ ಆಗಮ ಸಾಹಿತ್ಯವನ್ನು ಲಿಪಿಬದ್ಧಗೊಳಿಸುವ ಮಹತ್ವಪೂರ್ಣ ಕಾರ್ಯವೂ ಈ ಸಮ್ಮೇಳನದಲ್ಲಿ ನಡೆಯಿತು. ದೃಷ್ಟಿವಾದವು ಉಪಲಬ್ಧವೇ ಆಗದೇ ಹೋದುದರಿಂದ ಅದು ನಷ್ಟವಾದುದೆಂದೂ ಘೋಷಿಸಲಾಯಿತು. ಈ ಸಮನ್ವಯದ ಆಧಾರದ ಮೇಲೆ ಕ್ರಿ.ಶ. 5ನೆಯ ಶತಕದಲ್ಲಿ ನಡೆದ ಸಂಕಲನ ಶ್ವೇತಾಂಬರ ಸಂಪ್ರದಾಯದವರ ಮನ್ನಣೆಗೆ ಪಾತ್ರವಾಯಿತು.

ಈ ಮೊದಲೇ ವಿವರಿಸಿದಂತೆ, ಮಹಾವೀರ ನಿರ್ವಾಣದ ನಂತರದ 1000 ವರ್ಷಗಳ ಹೊತ್ತಿಗೆಂದರೆ ಸಂಕಲಿತ ಜೈನ ಆಗಮಗಳಲ್ಲಿ ಅನೇಕ ಮಹತ್ವ ಪೂರ್ಣ ಪರಿವರ್ತನೆಗಳು ಸಂಭವಿಸಿರಲು ಸಾಕು. ಈ ಆಗಮಗಳ ಟೀಕಾ ಕಾರರು ಆಗಮಗಳ ಅನೇಕ ಪಾಠಾಂತರಗಳನ್ನು ತಮ್ಮ ಟೀಕೆಗಳಲ್ಲಿ ಉಲ್ಲೇಖಿಸಿರುವುದುಂಟು. ಈ ಪಾಠಾಂತರಗಳಿಂದಾಗಿ ಅರ್ಥದಲ್ಲಿ ವಿಪರ್ಯಾಸವುಂಟಾಗುವ ಸಾಧ್ಯತೆಯನ್ನು ಅವರು ಎತ್ತಿ ತೋರಿಸಿದ್ದಾರೆ. ಈ ವಿಪರ್ಯಾಸದ ಸಾಧ್ಯತೆಗಳನ್ನು ಕಡಿಮೆ ಮಾಡುವ ದೃಷ್ಟಿಯಿಂದ ಸಾಕಷ್ಟು ಸಂಶೋಧನೆಯನ್ನೂ ಕೈಕೊಳ್ಳಲಾಯಿತು. ಆಗಮಗಳ ಮೂಲ ಭಾಷೆಯ ಪ್ರಶ್ನೆಯಂತೂ ಇನ್ನೂ ಜಟಿಲವಾದದ್ದು ಭಗವಾನ ಮಹಾವೀರರು ತಮ್ಮ ಜೀವನಾವಧಿಯಲ್ಲಿ ತಮ್ಮ ಪ್ರವಚನಗಳಿಗಾಗಿ ಬಳಸಿರಬಹುದಾದ ಅರ್ಧಮಾಗಧಿ ಭಾಷೆ ಅವರ ನಿರ್ವಾಣದ ನಂತರದ 1000 ವರ್ಷಗಳಲ್ಲಿ ನಿಶ್ಚಿತವಾಗಿಯೂ ಸಾಕಷ್ಟು ಬದಲಾವಣೆ

ಹೊಂದಿರಬೇಕು. ವಾಸ್ತವಿಕವಾಗಿ ಆಗಮಗಳ ಮೂಲಭಾಷೆ ಅವುಗಳನ್ನು ಲಿಪಿಬದ್ಧಗೊಳಿಸುವ ಹೊತ್ತಿಗೆಂದರೆ ಬೇರೆಯೇ ಆಗಿರಬಹುದು; ಅವುಗಳನ್ನು ಲಿಪಿಬದ್ಧಗೊಳಿಸುವಾಗಿದ್ದ ಭಾಷೆ ವರ್ತಮಾನಕಾಲದ ಆಗಮಗಳಲ್ಲಿ ಇಲ್ಲದಿರಬಹುದು, ಅದಲ್ಲದೆ, ಜೈನಧರ್ಮದ ಪ್ರಚಾರಕ್ಕಾಗಿ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿದ ಜೈನ ಆಚಾರ್ಯರ ಭಾಷೆಯ ಮೇಲೆ ಆಯಾ ಭಾಗಗಳಲ್ಲಿ ಪ್ರಚಲಿತವಿದ್ದ ಜಾನಪದ ಭಾಷೆಯ ಪರಿಣಾಮವಾಗಿರುವುದೂ ಸಾಧ್ಯ. ಅದರಿಂದಾಗಿ ಆಗಮಗಳ ಭಾಷೆ ಭಿನ್ನವಾಗಿ ಕಾಣುವುದು ಸ್ವಾಭಾವಿಕವಾಗಿದೆ. ವಿಭಿನ್ನ ಆಗಮ-ಗ್ರಂಥಗಳಲ್ಲಿ ಪ್ರಾಕೃತ ವ್ಯಾಕರಣದ ಭಿನ್ನ ಭಿನ್ನ ರೂಪಗಳು ಕಂಡು ಬರುವುದೇ ಈ ಭಾಷಾಪರಿವರ್ತನೆಗೊಂದು ನಿದರ್ಶನ.

## ದಿಗಂಬರ ಮತ್ತು ಶ್ವೇತಾಂಬರ ಪರಂಪರೆಗಳು

ಬುದ್ಧ-ಪರಿನಿರ್ವಾಣದ ತರುವಾಯ ಬುದ್ಧನ ತತ್ವಗಳ ವಿಷಯದಲ್ಲಿ ಬೌದ್ಧ ಪರಂಪರೆಯಲ್ಲಿ ಹೀನಯಾನ ಮತ್ತು ಮಹಾಯನ-ಎಂಬೆರೆಡು ಪಂಥಗಳು ನಿರ್ಮಾಣಗೊಂಡ ಹಾಗೆಯೇ ಮಹಾವೀರರ ತತ್ತ್ವೋಪದೇಶದ ವಿಷಯದಲ್ಲಿಯೂ ನಡೆಯಿತೆನ್ನಬಹುದು. ಈ ಸಂದರ್ಭದಲ್ಲಿ ಜೈನ ಆಗಮಗಳಲ್ಲಿ ಉಲ್ಲೇಖಿಸಲಾಗಿರುವ ಏಳು 'ನಿಹ್ರವ'ಗಳ ವಿಷಯ ಗಮನಾರ್ಹವಾಗಿದೆ. ನಿಹ್ರವ ಎಂದರೆ ಅಸ್ವೀಕೃತಿ, ಅನುಮಾನ ಅಥವಾ ಸಂದೇಹ ಅರ್ಥಾತ್ ಭಗವಾನರ ತತ್ತ್ವೋಪದೇಶದ ಕುರಿತು ಈ ನಿಹ್ರವಗಳ ಪ್ರತಿಪಾದಕರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದವು; ಮತ್ತೆ ಅವರು ತಮ್ಮ ತಮ್ಮ ಸ್ವಂತ ಮತಗಳನ್ನು ಮಂಡಿಸಿದರು. ಅವರಲ್ಲಿ ಮೊಟ್ಟ ಮೊದಲಿಗೆ ಸ್ಮರಿಸಿಕೊಳ್ಳುವ ಹೆಸರೆಂದರೆ ಜಾಮಾಲಿಯದು. ಆತ ಭಗವಾನ ಮಹಾವೀರರ ಅಕ್ಕನ ಮಗನೂ ಹೌದು; ಅಳಿಯನೂ ಹೌದು, ಮಹಾವೀರರು ಜಾಮಾಲಿಗೆ ಶ್ರಮಣ ದೀಕ್ಷೆ ನೀಡಿದ ಸಂಗತಿ ಈ ಮೊದಲೇ ಉಲ್ಲೇಖಿಸಲ್ಪಟ್ಟಿದೆ. ಮಹಾವೀರರ ಜೀವನಾವಧಿಯಲ್ಲಿಯೇ- ಅವರಿಗೆ ಕೇವಲ ಜ್ಞಾನ ಪ್ರಾಪ್ತಿಯಾದ 14 ವರ್ಷಗಳ ನಂತರ- ಜಾಮಾಲಿಯ ನಿಹ್ರವದ ಪ್ರತಿಪಾದನೆ ನಡೆಯಿತು. ಅದಾದ ಎರಡು ವರ್ಷಗಳ ನಂತರ ಚತುರ್ದಶ ಪೂರ್ವಧಾರೀ ಆಚಾರ್ಯ ವಸು ಅವರ ಶಿಷ್ಯ ತಿಷ್ಯಗುಪ್ತರಿಂದ ಎರಡನೆಯ ನಿಹ್ರವದ ಪ್ರತಿಪಾದನೆಯಾಯಿತು. ಇನ್ನುಳಿದ ಐದು ನಿಹ್ರವಗಳ ಉತ್ಪತ್ತಿ ಭಗವಾನ ಮಹಾವೀರರ ನಿರ್ವಾಣದ ನಂತರ ನಡೆಯಿತು. ಏಳನೆಯ ನಿಹ್ರವವು ಮಹಾವೀರ-ನಿರ್ವಾಣದ 584 ವರ್ಷಗಳ ನಂತರದ್ದೆಂದು ಪ್ರತೀತಿಯಿದೆ. ಈ ನಿಹ್ರವಗಳ ಸಂಕ್ಷಿಪ್ತ ವಿವರಣೆ ಜೈನ ಆಗಮಗಳ ಟೀಕೆಗಳಲ್ಲಿ ದೊರೆಯುತ್ತದೆ. ಇವುಗಳ ವಿಸ್ತೃತ ಸ್ವರೂಪದ ಪರಿಚಯ ಮಾತ್ರ ದೊರೆಯುವುದಿಲ್ಲ. ದಿಗಂಬರ ಸಂಪ್ರದಾಯದಲ್ಲಿ ಈ ನಿಹ್ರವಗಳ ಉಲ್ಲೇಖವೇ ಇಲ್ಲ.

ಈ ಸಂದರ್ಭದಲ್ಲಿ ದಿಗಂಬರ-ಶ್ವೇತಾಂಬರ ಮತಭೇದವು ವಿಚಾರಣೀಯವಾಗಿದೆ. ಮಹಾವೀರರ ಕಾಲದಲ್ಲಿ ಈ ಮತಭೇದವಿರಲಿಲ್ಲ. ಉತ್ತರ ಕಾಲೀನ ಶ್ವೇತಾಂಬರ ಗ್ರಂಥಗಳಲ್ಲಿ ಬೋಟಿಕ ನಿಹ್ರವ-ಅಂದರೆ ದಿಗಂಬರ ಸಂಘವೆಂಬ ಎಂಟನೆಯ ನಿಹ್ರವದ ಉಲ್ಲೇಖ ದೊರೆಯುತ್ತದೆ. ಅದರ ಉತ್ಪತ್ತಿ ಮಹಾವೀರರ ನಿರ್ವಾಣದ 609 ವರ್ಷಗಳ ನಂತರದ್ದೆಂದು ಹೇಳಲಾಗುತ್ತದೆ. ಮೋಕ್ಷ ಪ್ರಾಪ್ತಿಗಾಗಿ ವಸ್ತ್ರಧಾರಣ ಮಾಡುವ ವಿಷಯದ ಬಗ್ಗೆ ಹೇಳುವುದಾದರೆ,

ಉಪಲಬ್ಧವಿರುವ ಶ್ವೇತಾಂಬರ ಆಗಮುಗಳಲ್ಲಿ ಸವಸ್ತ್ರ ಮತ್ತು ವಿವಸ್ತ್ರ ಪರಂಪರೆಗಳೆರಡರ ಉಲ್ಲೇಖವೂ ದೊರೆಯುತ್ತದೆ-ಅಂದರೆ ಯಾವ ಸಾಧುಗಳಿಗೆ ವಸ್ತ್ರಗಳ ಆಗತ್ಯವೆನಿಸುವುದಿಲ್ಲವೋ ಅವರು ವಸ್ತ್ರಗಳನ್ನು ಬಿಟ್ಟು ಬಿಡಬಹುದು; ಯಾರಿಗೆ ವಸ್ತ್ರಗಳು ಆಗತ್ಯವೆನಿಸುವವೋ ಅವರು ವಸ್ತ್ರಧಾರಣ ಮಾಡಬಹುದು. ಶ್ವೇತಾಂಬರ ಸಂಪ್ರದಾಯದ ಪ್ರಕಾರ ಭಗವಾನ ಮಹಾವೀರರು ವಸ್ತ್ರಧಾರಣ ಮಾಡುತ್ತಿರಲಿಲ್ಲ; ಆದರೆ ಪಾರ್ಶ್ವನಾಥರ ಶಿಷ್ಯರು ಸವಸ್ತ್ರರಾಗಿರುತ್ತಿದ್ದರು. ಕೇಶಿ-ಗೌತಮರ ಸಂವಾದ ನಡೆದ ಸಂದರ್ಭದಲ್ಲಿ ಕೇಶಿಯು ಈ ವಸ್ತ್ರಧಾರಣದ ಪ್ರಶ್ನೆಯನ್ನೆತ್ತಿದಾಗ ಈ ವಸ್ತ್ರಗಳು ಅಥವಾ ಬಾಹ್ಯವೇಷ ಕೇವಲ ಸಾಧನವಾಗಿದೆ; ಚಿತ್ತ ಶುದ್ಧಿಯೇ ಮುಖ್ಯವೆಂದು ಗೌತಮರು ಉತ್ತರಿಸಿದ್ದರು. ಅಂದರೆ ಆ ಹಂತದವರೆಗೆ ದಿಗಂಬರ-ಶ್ವೇತಾಂಬರವೆಂಬ ಮತಭೇದವೇ ನಿರ್ಮಾಣ ಗೊಂಡಿರಲಿಲ್ಲವಂದೇ ತೋರುತ್ತದೆ.

ಮಹಾವೀರರ ನಂತರ ಗೌತಮ, ಇಂದ್ರಭೂತಿ, ಸುಧರ್ಮಾ ಮತ್ತು ಜಂಬೂಸ್ವಾಮಿ-ಇವರೆಲ್ಲರ ಪರಂಪರೆಯನ್ನು ದಿಗಂಬರ- ಶ್ವೇತಾಂಬರ ಸಂಪ್ರದಾಯಗಳೆರಡೂ ಮನ್ನಿಸುತ್ತವೆ. ಮಹಾವೀರ-ನಿರ್ವಾಣದ ನಂತರ ತಮಗೆ ಕೇವಲ ಜ್ಞಾನಪ್ರಾಪ್ತಿ ಆಗುವ ವರೆಗೂ ಆರ್ಯ ಸುಧರ್ಮಾ ಅವರು ಜೈನ ಸಂಘದ ನೇತೃತ್ವ ನಿರ್ವಹಿಸಿದರು- ಅದರ ನಂತರ ಆ ಹೊಣೆಯನ್ನು ತಮ್ಮ ಶಿಷ್ಯ ಜಂಬೂಸ್ವಾಮಿಗೆ ವಹಿಸಿಕೊಟ್ಟು 100 ವರ್ಷಾವಧಿ ತಲುಪಿ ನಿರ್ವಾಣ ಹೊಂದಿದರು. ಜಂಬೂಸ್ವಾಮಿ ಕೈವಲ್ಯಾವಸ್ಥೆ ಹೊಂದಿದವರಲ್ಲಿ ಕೊನೆಯವರು. ಅವರ ನಂತರ ಕೇವಲ ಜ್ಞಾನ ಮತ್ತು ನಿರ್ವಾಣ ಹೊಂದಿದವರಾರಿಲ್ಲ. ಅದರ ನಂತರ ಎರಡು ಭಿನ್ನ ಪರಂಪರೆಗಳುಂಟಾದವು. ದಿಗಂಬರ ಪರಂಪರೆಯಲ್ಲಿ ವಿಷ್ಣು ನಂದಿ, ಅಪರಾಜಿತ, ಗೋವರ್ಧನ ಮತ್ತು ಭದ್ರಬಾಹು ಎಂಬವರೂ ಶ್ವೇತಾಂಬರ ಪರಂಪರೆಯಲ್ಲಿ ಪ್ರಭವ, ಶಯ್ಯಂಭವ, ಯಶೋಭದ್ರ, ಸಂಭೂತವಿಜಯ, ಮತ್ತು ಭದ್ರಬಾಹು ಎಂಬ ಐವರೂ ಕೇವಲ ಜ್ಞಾನಿಗಳಾಗಿ ಹೋದರು. ಭದ್ರಬಾಹು ಹದಿನಾಲ್ಕು ಪೂರ್ವಗಳ ಬಲ್ಲಿದರೂ ಕೊನೆಯ ಶ್ರುತ ಕೇವಲ ಜ್ಞಾನಿಗಳೂ ಆಗಿದ್ದರೆಂದು ಎರಡೂ ಸಂಪ್ರದಾಯಗಳೂ ಮಾನ್ಯ ಮಾಡಿವೆ. ಆಚಾರ್ಯ ಭದ್ರಬಾಹು ಜೈನ ಶ್ರಮಣರ ಪ್ರಥಮ ಸಮ್ಮೇಳನ ಅಥವಾ ಪಾಟಲೀಪುತ್ರ ವಾಚನಾದ ಕಾಲದವರೆಂದು ಗ್ರಹಿಕೆ.

ಮಥುರಾದ ಅಸ್ಥಿಪಂಜರಗಳ ದಿಬ್ಬದಲ್ಲಿ 2000 ವರ್ಷಗಳಷ್ಟು ಪ್ರಾಚೀನವೆಂದು ಭಾವಿಸಲಾದ ಜೈನ ತೀರ್ಥಂಕರರ ನಗ್ನ ಮೂರ್ತಿಗಳು ದೊರೆತಿದ್ದು, ಅವು ದಿಗಂಬರ-ಶ್ವೇತಾಂಬರ ಸಂಪ್ರದಾಯಗಳೆರಡರಿಂದಲೂ ಪೂಜಿಸಲ್ಪಡುತ್ತಿದ್ದವು. ಅಂದರೆ ಕ್ರಿ.ಶ. ಪ್ರಥಮ ಶತಮಾನದಾರಂಭ ಕಾಲದಲ್ಲೂ ಯಾವ ಮತಭೇದವಿರಲಿಲ್ಲವೆಂದೇ ಸಿದ್ಧವಾಗುತ್ತದೆ. ಎರಡೂ ಸಂಪ್ರದಾಯಗಳ ಪ್ರಾಚೀನ ಸಾಹಿತ್ಯದಲ್ಲಿ ಬಂದಿರುವ ಪರಂಪರಾಗತ ಪ್ರತಿಪಾದನೆ ಮತ್ತು ಅವುಗಳಿಗೆ ಸಂಬಂಧಿಸಿದ ಗಾಥೆಗಳ ಸಮಾನಾಂಶಗಳ ಮೇಲಿಂದಲೂ ಎರಡೂ ಸಂಪ್ರದಾಯಗಳ ಮೂಲ ಸ್ರೋತ ಒಂದೇ ಆಗಿತ್ತೆಂಬ ಮಾತು ಮನದಟ್ಟಾಗುತ್ತದೆ.

ಈ ಎರಡೂ ಸಂಪ್ರದಾಯಗಳಲ್ಲಿ ಮತಭೇದವುಂಟಾಗಲು ಮುಖ್ಯ ಕಾರಣವೆಂದರೆ : ವಸ್ತ್ರ. ಈ ದೃಷ್ಟಿಯಿಂದ ದಿಂಗಬರ (ವಸ್ತ್ರರಹಿತ) ಮತ್ತು ಶ್ವೇತಾಂಬರ (ವಸ್ತ್ರಸಹಿತ) ಪದಗಳೆರಡೂ ಸಾಂಕೇತಿಕವಾಗಿವೆ. ಈ ವಸ್ತ್ರಧಾರಣದ ವಿಷಯದಲ್ಲಿ ಪಾರ್ಶ್ವನಾಥರ

ಅನುಯಾಯಿ ಶ್ರಮಣಕುಮಾರ ಕೇಶಿ ಮತ್ತು ಮಹಾವೀರರ ಅನುಯಾಯಿ ಗೌತಮ ಇಂದ್ರಭೂತಿಯರ ಕಾಲದಿಂದಲೂ ಚರ್ಚೆ ನಡೆದುದೇನೋ ನಿಜ, ಆದರೆ ಕ್ರಿ.ಶ. ಒಂದನೆಯ ಶತಮಾನದ ಕೊನೆಯ ಹಂತದಲ್ಲಿ ಮಾತ್ರ ಈ ವಿವಾದಕ್ಕೊಂದು ಸ್ಥಾಯೀ ಸ್ವರೂಪ ಬಂದಿತೆನ್ನಬೇಕು. ಮಹಾವೀರ-ನಿರ್ವಾಣದ 609 ವರ್ಷಗಳ ನಂತರ (ಕ್ರಿ.ಶ. 83), ಶ್ವೇತಾಂಬರ ಸಂಪ್ರದಾಯದವರಿಂದ ದಿಗಂಬರ ಸಂಪ್ರದಾಯದ, ಮತ್ತು ವಿಕ್ರಮಾದಿತ್ಯ ದೊರೆಯ ಮರಣದ 136 ವರ್ಷಗಳ ನಂತರ (ಕ್ರಿ.ಶ. 80)[1] ದಿಗಂಬರ ಸಂಪ್ರದಾಯದವರಿಂದ ಶ್ವೇತಾಂಬರ ಸಂಪ್ರದಾಯದ ಉತ್ಪತ್ತಿಯಾದ ಸಂಗತಿ ಉಲ್ಲೇಖಿಸಲ್ಪಟ್ಟಿದೆ. ಇಬ್ಬರ ದಾರಿಗಳೂ ಬೇರೆ ಬೇರೆಯಾದಂತೆ ವಾದ-ವಿವಾದ ನಡೆದಿವೆ. ಆಗಮ ಸಾಹಿತ್ಯದಲ್ಲಿ ತಲೆದೋರಿದ ವಿಸಂಗತಿಗಳಿಂದಾಗಿ ಈ ಎರಡೂ ಮತಭೇದಗಳಿಗೆ ಮತ್ತಷ್ಟು ಪುಷ್ಟಿ ದೊರೆಯಿತು. ಮೂಲ ಪರಂಪರೆ ಮರೆವಿನ ಪರದೆ ಸೇರುತ್ತ ಹೋದ ಹಾಗೆಲ್ಲ ಭಗವಾನ ಮಹಾವೀರರ ಜೀವನದ ಬಗೆಗೂ ಎರಡೂ ಸಂಪ್ರದಾಯಗಳಲ್ಲಿ ಭಿನ್ನಾಭಿಪ್ರಾಯ ಬಲಿತು ನಿಂತಿತು. ಬರುಬರುತ್ತ ದಿಗಂಬರ ಮತ್ತು ಶ್ವೇತಾಂಬರ ಪ್ರತಿಮೆಗಳ ಪ್ರತ್ಯೇಕ ಪೂಜೆ ನಡೆಯಲಾರಂಭಿಸಿತು. ಅಷ್ಟೇ ಅಲ್ಲ, ಇಬ್ಬರ ಪೂಜಾವಿಧಿ-ಕ್ರಿಯಾಕಾಂಡ ಮುಂತಾದವುಗಳಲ್ಲೂ ಕ್ರಮೇಣ ಅಂತರ ಬೆಳೆಯುತ್ತ ಹೋಯಿತು. ವಸ್ತುತಃ ಬಾಹ್ಯ ಕ್ರಿಯಾಕಾಂಡದ ಬಗೆಗೆ ಎರಡೂ ಸಂಪ್ರದಾಯಗಳಲ್ಲಿ ಮತಭೇದವುಂಟೇ ವಿನಹ ಮಹಾವೀರರು ಪ್ರತಿಪಾದಿಸಿದ ಮೌಲಿಕ ಸಿದ್ಧಾಂತಗಳ ಬಗೆಗೇನೂ ಭಿನ್ನಾಭಿಪ್ರಾಯವಿದ್ದಂತೆ ತೋರುವುದಿಲ್ಲ.

1467ರಲ್ಲಿ ಶ್ವೇತಾಂಬರ ಸಂಪ್ರದಾಯದಲ್ಲಿ ಸ್ಥಾನಕ ವಾಸೀ ಸಂಪ್ರದಾಯದ ಉತ್ಪತ್ತಿಯಾಯಿತು. ಇದರ ಪ್ರವರ್ತಕರಾದ ಲೌಂಕಾ ಶಹಾರು ಅಹಮ್ಮದಾಬಾದ ನಗರ ವಾಸಿಗಳಾಗಿದ್ದರು. ಈ ಸಂಪ್ರದಾಯಕ್ಕೆ ಧೂಂಢಿಯಾ (ಶೋಧಿಸುವವರ) ಪಂಥವೆಂದು ಹೆಸರು. ಇವರು ಮೂರ್ತಿ ಪೂಜೆಯನ್ನು ಮನ್ನಿಸುವವರಲ್ಲ. ಈ ಸಂಪ್ರದಾಯದ ಅನುಯಾಯಿಗಳು ತಮ್ಮ ಧರ್ಮ ಸ್ಥಳಗಳನ್ನು ಸ್ಥಾನಕಗಳೆಂದು ಕರೆಯುತ್ತಾರೆ. ಈ ಸ್ಥಾನಕಗಳಲ್ಲಿ ಮೂರ್ತಿ ಪ್ರತಿಷ್ಠಾಪನೆಯೆಂಬುದಿಲ್ಲ. ಮೂರ್ತಿ ಪೂಜೆಯ ಉಲ್ಲೇಖವಿರುವ ಆಗಮಗಳನ್ನೂ ಇವರು ಮನ್ನಿಸುವುದಿಲ್ಲ, ತಮ್ಮ ಸಾಧುಗಳ ಬಗೆಗೆ ಈ ಅನುಯಾಯಿಗಳು ಅತ್ಯಂತ ಶ್ರದ್ಧಾಶೀಲರಾಗಿರುತ್ತಾರೆ. ಧರ್ಮಪಠನ ಮತ್ತು ಪ್ರವಚನಗಳ ಹೊರತಾಗಿ ಇತರ ಸಮಾಜ ಸುಧಾರಣಾ ಕಾರ್ಯದಲ್ಲಿಯೂ ಅನೇಕ ಸ್ಥಾನಕವಾಸಿಗಳು ಭಾಗಿಗಳಾಗುವುದುಂಟು. ಈ ಸ್ಥಾನಕವಾಸೀ ಸಂಪ್ರದಾಯದ ಅನುಯಾಯಿಗಳು ಉತ್ತರ ಭಾರತದ ಹಲವೊಂದು ಕಡೆಗಳಲ್ಲಿ ಹರಡಿಕೊಂಡಿದ್ದಾರೆ.

---

1. ದಿಗಂಬರರಲ್ಲಿ ಮತ್ತೊಂದು ಪರಂಪರೆಯೂ ಉಂಟು. ಸಾಮ್ರಾಟ್ ಚಂದ್ರ ಗುಪ್ತನ ಕಾಲದಲ್ಲಿ (ಕ್ರಿ.ಪೂ. ನಾಲ್ಕನೇ ಶತಕ) ಪಾಟಲೀಪುತ್ರದಲ್ಲಿ ದುರ್ಭಿಕ್ಷ ಪರಿಸ್ಥಿತಿಯುಂಟಾದಾಗ ಭದ್ರಬಾಹುಮುನಿ ತಮ್ಮ ಸಂಘದೊಡನೆ ದಕ್ಷಿಣಭಾರತದ ಸಂಚಾರಕ್ಕೆ ಹೊರಟರು. ಸ್ಥೂಲಭದ್ರಮುನಿ ತಮ್ಮ ಸಂಘದೊಡನೆ ಮಗಧದಲ್ಲಿದ್ದರು. ದುರ್ಭಿಕ್ಷ ಪರಿಸ್ಥಿತಿ ಮುಗಿದ ಬಳಿಕ ಭದ್ರಬಾಹು ಮುನಿಗಳು ಶಿಷ್ಯರೊಂದಿಗೆ ಮಗಧಕ್ಕೆ ಮರಳಿ ಬಂದು ನೋಡಿದಾಗ ಮಗಧದಲ್ಲುಳಿದಿದ್ದ ಸಾಧುಗಳ ಆಚಾರಗಳಲ್ಲಿ ಸಾಕಷ್ಟು ಪರಿವರ್ತನೆಯಾದಂತೆ ಕಂಡಿತು. ಈ ಸಾಧುಗಳು ಶ್ವೇತವಸ್ತ್ರಧಾರಣ ಮಾಡಲಾರಂಭಿಸಿದ್ದರು. ದಕ್ಷಿಣಕ್ಕೆ ಹೋಗಿ ಬಂದ ಸಾಧುಗಳು ಮಾತ್ರ ಮಹಾವೀರರಂತೆ ನಗ್ನರಾಗಿರುತ್ತಿದ್ದರು.

ಇಂದಿಗೆ ಸುಮಾರು 200 ವರ್ಷಗಳ ಹಿಂದೆ ಆಚಾರ್ಯ ಭಿಕ್ಷು ಅಥವಾ ಭೀಖಣಜೀ 'ತೇರಾಪಂಥ'ದ ಸ್ಥಾಪನೆ ಮಾಡಿದರು. ಈ ಪಂಥದ ಸಾಧು-ಸಾಧ್ವಿಯರಿಗೆ ತಮ್ಮದೆನ್ನುವ ಧರ್ಮ ಸ್ಥಾನವೇ ಇರುವುದಿಲ್ಲ, ಅವರು ಹೋದ ಕಡೆಗೆಲ್ಲ ಕೊಂಚ ಸ್ಥಾನವನ್ನು ಬೇಡಿ ಪಡೆದುಕೊಂಡು ಅಲ್ಲಿರುತ್ತಾರೆ. ಆಚಾರ್ಯ ತುಳಸಿಯವರು ಈ ಪಂಥದ ಒಂಬತ್ತನೆಯ ಆಚಾರ್ಯರು. ನೂರಾರು ಸಾಧು-ಸಾಧ್ವಿಯರೂ, ಲಕ್ಷಗಟ್ಟಲೆ ಶ್ರಾವಕ-ಶ್ರಾವಿಕೆಯರೂ ಅವರ ಅನುಯಾಯಿಗಳು. ಅವರು ಅಣುವ್ರತ ಆಂದೋಲನದ ಪ್ರವರ್ತಕರೂ ಹೌದು. ಶ್ರೀ ಜೈನ ಶ್ವೇತಾಂಬರ ತೇರಾಪಂಥೀ ಮಹಾಸಭೆಯ ಪರವಾಗಿ ಜೈನ ಆಗಮಗಳ ಪ್ರಕಾಶನದ ಮಹತ್ವಪೂರ್ಣ ಕಾರ್ಯವನ್ನೂ ಕೈಗೆತ್ತಿಕೊಳ್ಳಲಾಗಿದೆ.

# ಶ್ರಮಣ ಸಂಘದ ಧರ್ಮ ಪ್ರಚಾರ

ಲಿಚ್ಛವೀ ವಂಶದವರು ತಮ್ಮ ಗಣ ಅಥವಾ ಸಂಘ ವ್ಯವಸ್ಥೆಗಾಗಿ ಹೆಸರಾದವರು. ಭಗವಾನ ಮಹಾವೀರರು ಜನ್ಮ ತಾಳಿದ್ದು ಲಿಚ್ಛವೀ ವಂಶದಲ್ಲಿ. ಆದುದರಿಂದ ಅವರ ಸಂಘ ವ್ಯವಸ್ಥೆಯ ಪ್ರಭಾವ ಮಹಾವೀರರ ಮನಸ್ಸಿನ ಮೇಲಾಗಿರಲೇಬೇಕು. ಪಾರ್ಶ್ವನಾಥರಂತೆ ಮಹಾವೀರರ ಸಂಘವೂ ನಾಲ್ಕು ಭಾಗಗಳಲ್ಲಿ ವಿಂಗಡನೆ ಹೊಂದಿತ್ತು-ಶ್ರಮಣ, ಶ್ರಮಣಿ, ಶ್ರಾವಕ ಮತ್ತು ಶ್ರಾವಿಕಾ ಚತುರ್ವಿಧ ಸಂಘವೆಂದು ಇದಕ್ಕೆ ಹೆಸರು. ಈ ವಿಭಾಗಗಳಲ್ಲಿರುವ ಶ್ರಮಣ-ಶ್ರಮಣಿಯರ ಮತ್ತು ಶ್ರಾವಕ-ಶ್ರಾವಿಕೆಯರ ಯೋಗ ಕ್ಷೇಮ ನೋಡಿಕೊಳ್ಳುವುದಷ್ಟೇ ಅಲ್ಲದೆ, ಶ್ರಮಣ-ಶ್ರಮಣಿಯರೂ, ಶ್ರಾವಕ-ಶ್ರಾವಿಕೆಯರೂ ಪರಸ್ಪರರಲ್ಲಿ ಧರ್ಮಶ್ರದ್ಧೆ ಗಾಢವಾಗಿರುವಂತೆಯೂ ಪ್ರಯತ್ನಶೀಲರಾಗಿರುತ್ತಿದ್ದರು. ಜೈನ ಸಾಧುಗಳು ದೂರ ದೂರದ ಪ್ರದೇಶಗಳಲ್ಲಿ ಸಂಚರಿಸಿ ನಿರ್ಗ್ರಂಥ ಧರ್ಮ ಪ್ರಚಾರ ಮಾಡುತ್ತಿದ್ದರು; ಮತ್ತು ಸಮಾಜದಲ್ಲಿ ಅಹಿಂಸಾ ಭಾವವನ್ನು ಪ್ರಚುರಪಡಿಸುತ್ತಿದ್ದರು; ಅಲ್ಲಲ್ಲಿಯ ಗೃಹಸ್ಥ ಜನರು ಇವರ ಆಹಾರ-ವಸತಿಗಳಿಗಾಗಿ ಯೋಗ್ಯ ವ್ಯವಸ್ಥೆ ಮಾಡಿಕೊಟ್ಟು ಧರ್ಮ ಪ್ರಚಾರದ ಪುಣ್ಯಕಾರ್ಯದಲ್ಲಿ ಸಹಯೋಗ ನೀಡುತ್ತಿದ್ದರು.

ತಮ್ಮ ಶ್ರಮಣ ಸಂಘವು ಸದೃಢವಾಗಿರಲೆಂಬ ದೃಷ್ಟಿಯಿಂದ ಮಹಾವೀರರು ಕಠೋರ ನಿಯಮಾವಳಿಯನ್ನು ರಚಿಸಿದ್ದರು. ಅವರೆಂದರು- "ಹೇ ಆಯುಷ್ಮವಂತ ಶ್ರಮಣರೇ, ನಿಮ್ಮ ಇಂದ್ರಿಯಗಳ ಮೇಲೆ ನಿಗ್ರಹವಿರಲಿ. ನಿದ್ರೆಯಲ್ಲಿ, ಎಚ್ಚರದಲ್ಲಿ, ಕುಳಿತಲ್ಲಿ, ನಿಂತಲ್ಲಿ, ನಡೆವಲ್ಲಿ, ತಡೆವಲ್ಲಿ-ಸದಾ ಜಾಗರೂಕರಾಗಿರಬೇಕು. ಒಂದು ಕ್ಷಣವೂ ಪ್ರಮಾದ ಸಂಭವಿಸದಿರಲಿ. ಯಾವಾಗ, ಯಾವ ಕಡೆಯಿಂದ ಯಾವ ಪ್ರಲೋಭನದ ಅಲೆ ಬೀಸಿ ಬಂದು ನಿಮ್ಮನ್ನು ಅಸ್ಥಿರಗೊಳಿಸುವುದೋ ಹೇಳಲಾಗದು. ಆದುದರಿಂದ ಆಪತ್ಕಾಲದಲ್ಲಿ ಆಮೆಯು ತನ್ನ ಅಂಗ-ಪ್ರತ್ಯಂಗಗಳನ್ನೆಲ್ಲ ತನ್ನ ಕವಚದಲ್ಲಿ ಅಡಗಿಸಿಕೊಳ್ಳುವಂತೆ ನೀವೂ ನಿಮ್ಮ ಮನವನ್ನು ನಿಮ್ಮ ವಶದಲ್ಲಿಟ್ಟುಕೊಳ್ಳಬೇಕು; ನಿಮ್ಮ ಚಂಚಲ ಮನೋವೃತ್ತಿಗಳು ಅತ್ತಿತ್ತ ಚಲಿಸದಂತೆ ತಡೆ ಹಾಕಬೇಕು."

ಜೈನ ಶ್ರಮಣರು ಪಂಚಮಹಾವ್ರತಗಳನ್ನು ಪಾಲಿಸುವಾಗ ತಮಗಾಗಿ ಅಥವಾ ತಮ್ಮ ಉದ್ದೇಶದಿಂದ ತಯಾರಿಸಿದ ಆಹಾರಸೇವನೆ ಮಾಡುವುದಿಲ್ಲ; ಔತಣಗಳನ್ನು ಸ್ವೀಕರಿಸುವುದಿಲ್ಲ; ಫಲಾಹಾರವನ್ನೂ ತ್ಯಜಿಸಿ ಭಿಕ್ಷಾವೃತ್ತಿಯ ಮೇಲೆ ದಿನಗಳೆಯುತ್ತಾರೆ. ಒಟ್ಟಿನಲ್ಲಿ, ತಮ್ಮಿಂದ ಪರರಿಗೆ ಎಳ್ಳಷ್ಟೂ ತೊಂದರೆಯುಂಟಾಗಬಹುದಾದ ಯಾವ ಕಾರ್ಯವನ್ನೂ ಅವರು ಮಾಡುವುದಿಲ್ಲ.

ಕಾಯಕ್ಲೇಶದ ಮೂಲಕ ಮನಸ್ಸು ಮತ್ತು ಇಂದ್ರಿಯಗಳ ಮೇಲೆ ವಿಜಯ ಸಂಪಾದಿಸುವ ಆದರ್ಶವನ್ನು ತಮ್ಮ ತಪಸ್ವೀ ಜೀವನಾವಧಿಯಲ್ಲಿ ಮಹಾವೀರರು ತೋರಿಸಿಕೊಟ್ಟಿದ್ದರು. ಅವರ ನಂತರದ ಶಿಷ್ಯರೂ, ಪ್ರಶಿಷ್ಯರೂ ಆ ಆದರ್ಶವನ್ನೇ ಅನುಸರಿಸಿದರು. ತಮ್ಮ ಭೌತಿಕ ದೇಹದ

ಬಗ್ಗೆ ಅವರಲ್ಲಿ ಕಿಂಚಿತ್ತೂ ಮಹತ್ವವೆಂಬುದಿರಲಿಲ್ಲ. ಅವರ ತಪಸ್ಸು ಬಲು ಹಿರಿದಾಗಿತ್ತು.

ಹಸಿವು-ನೀರಡಿಕೆ, ಚಳಿ-ಬಿಸಿಲು, ಮಾನಾಪಮಾನ, ಲಾಭ-ಹಾನಿ, ಮುಂತಾದ ಬಳಲಿಕೆಗಳನ್ನಲ್ಲದೆ ಶ್ರಮಣರು ಇನ್ನಿತರ ಭಯಂಕರ ಯಾತನೆಗಳನ್ನೂ ಸಹಿಸಿಕೊಂಡಿರಬೇಕಾಗುತ್ತಿತ್ತು. ಧರ್ಮೋಪದೇಶಕ್ಕಾಗಿ ಅವರು ಊರೂರಿಗೆ ಸಂಚರಿಸುತ್ತಿದ್ದರು. ಹೋಗುವಾಗ, ಬರುವಾಗ ದಾರಿಯ ಮೇಲೆಯೂ ಅನೇಕ ಕಷ್ಟಗಳನ್ನು ಅನುಭವಿಸಬೇಕಾಗುತ್ತಿತ್ತು. ಕಾಡಾರಣ್ಯಗಳನ್ನು ದಾಟಿ ಹೋಗುವಾಗ ಹಿಂಸ್ರಪಶುಗಳ ಕಾಟವನ್ನೂ ಅರಣ್ಯ ವಾಸಿಗಳ ಮತ್ತು ಕಳ್ಳಕಾಕರ ಹಾವಳಿಗಳನ್ನೂ ಎದುರಿಸಬೇಕಾಗುತ್ತಿತ್ತು. ದುರ್ಗಮ ಪರ್ವತ, ಹಳ್ಳಹೊಳೆ, ಮಳಲುಗಾಡು ಮುಂತಾದವುಗಳನ್ನು ದಾಟಿ ದೂರದ ಸೀಮೆಗಳನ್ನು ಸೇರಬೇಕಾಗುತ್ತಿತ್ತು. ಅತಿವೃಷ್ಟಿಯಾದಾಗ, ಹೊಳೆ-ಹಳ್ಳಗಳಿಗೆ ಮಹಾಪೂರ ಬಂದಾಗ ಅಲ್ಲಿಯೇ ಕಾಯ್ದುಕೊಂಡಿದ್ದು ನೀರಿಳಿದ ಬಳಿಕ ಮುಂದಿನದಾರಿ ತುಳಿಯಬೇಕಾಗುತ್ತಿತ್ತು. ಒಮ್ಮೊಮ್ಮೆ ಮಾರ್ಗಗಳಿಲ್ಲದ ಕಡೆಗಳಲ್ಲಿ ದಾರಿ ತಪ್ಪಿ ದೂರ ಚದುರಿಹೋಗುವ ಸಂಭವವಿರುತ್ತಿತ್ತು. ರಾಜ್ಯಗಳಲ್ಲಿಯೂ ಆಗೊಮ್ಮೆ-ಈಗೊಮ್ಮೆ ಉಪದ್ರವವುಂಟಾಗುತ್ತಿತ್ತು. ಇಂಥ ಸಂದರ್ಭಗಳಲ್ಲಿ ಶ್ರಮಣರನ್ನು ಗೂಢಚಾರರೆಂಬ ತಪ್ಪು ತಿಳುವಳಿಕೆಯಿಂದ ರಾಜ್ಯದ ಕರ್ಮಚಾರಿಗಳು ಕಾಟ ಕೊಡುತ್ತಿದ್ದರು. ವಿಧರ್ಮೀ ರಾಜರಿದ್ದಲ್ಲಿ ಜೈನ ಶ್ರಮಣರನ್ನು ಗಡಿಪಾರು ಮಾಡಲಾಗುತ್ತಿತ್ತು. ಅವರ ಊಟ-ಉಪಚಾರಗಳಿಗೂ ಆತಂಕವಂಟಾಗುತ್ತಿತ್ತು; ಧರ್ಮೋಪಕರಣಗಳನ್ನು ಕಸಿದುಕೊಳ್ಳಲಾಗುತ್ತಿತ್ತಲ್ಲದೆ ಅನೇಕರ ಚಾರಿತ್ರ್ಯಕ್ಕೆ ಕಲಂಕ ಹಚ್ಚುವ ಕೆಲಸವೂ ನಡೆಯುತ್ತಿತ್ತು. ಆಗ ಜೈನ ಉಪಾಸಕರ ಸಂಖ್ಯೆ ಇನ್ನೂ ಸಣ್ಣದಾಗಿತ್ತು. ಈಗಿರುವಂತೆ ಆಗಿನ ಕಾಲದಲ್ಲಿ ಜೈನ ಸಾಧುಗಳು ತಂಗಿರುವ ಅನುಕೂಲತೆಗಳೂ ಹೆಚ್ಚಿಗಿರಲಿಲ್ಲ. ಒಮ್ಮೊಮ್ಮೆ ಒಂದೊಂದು ಮರದ ಕೆಳಗಡೆಯೇ ಏಕಾಂತವಾಸ ಮಾಡಬೇಕಾಗಿ ಬರುತ್ತಿತ್ತು. ರೋಗಗಳೂ, ದುರ್ಭಿಕ್ಷಕಾಲದ ಕಷ್ಟಗಳೂ ಬೇಕಾದಷ್ಟಿದ್ದವು. ಅನೇಕಬಾರಿ ಪ್ರಾಕೃತಿಕ ಪೀಡೆ, ಅಭಾವ ಪರಿಸ್ಥಿತಿ, ವೃದ್ಧಾವಸ್ಥೆ ಭಯಂಕರ ಕಾಯಿಲೆ ಮುಂತಾದ ಅಸಹನೀಯ ಯಾತನೆಗಳನ್ನು ಸಹಿಸುತ್ತ ಸಹಿಸುತ್ತ ಧರ್ಮದ ಸಲುವಾಗಿ ದೇಹ ತ್ಯಾಗ ಮಾಡುವ ಸಂದರ್ಭಗಳೂ ಅವರಿಗೆ ಬರುತ್ತಿದ್ದವು.

ಜೈನ ಸಾಧುಗಳಂತೆ, ಜೈನ ಸಾಧ್ವಿಯರೂ ಜೈನ ಸಂಘಗಳ ವಿಶಿಷ್ಟ ಅಂಗ ವೆನಿಸಿದ್ದರು. ಸಾಧುಗಳ ಹಾಗೆಯೇ ಅವರೂ ಮನೆಯಿಂದ ಮನೆಗೆ ಹೋಗಿ ಭಿಕ್ಷಾವೃತ್ತಿ ಕೈಕೊಳ್ಳಬೇಕಾಗುತ್ತಿತ್ತು. ಮೇಲಾಗಿ, ಸಾಧುಗಳಿಗಿಂತಲೂ ಈ ಸಾಧ್ವಿಯರು ಹೆಚ್ಚು ಕಟ್ಟುನಿಟ್ಟಿನ ಜೀವನ ಸಾಗಿಸಬೇಕಾಗುತ್ತಿತ್ತು. ಸಾಧುಗಳು ಸಾಧ್ಯವಾದಷ್ಟೂ ದಕ್ಷತೆವಹಿಸಿ ಈ ಸಾಧ್ವಿಯರ ಸಂರಕ್ಷಣೆ ಮಾಡಬೇಕು; ಅವರ ಶೀಲ-ವ್ರತ ಅಭಾದಿತವಾಗಿರುವಂತೆ ನೋಡಿಕೊಳ್ಳಬೇಕೆಂದು ಆದೇಶವಿತ್ತು.

ಬೌದ್ಧರಂತೆ ಜೈನರೂ ಸ್ತ್ರೀಯರೆಂದರೆ ಕಡಿಮೆ ದೋಷವುಳ್ಳವರೆಂದು ಭಾವಿಸುವದಿಲ್ಲವಾದರೂ, ಮಹಾವೀರರು ಸ್ತ್ರೀಯರ ಬಗೆಗೆ ಬುದ್ಧನಿಗಿಂತಲೂ ಹೆಚ್ಚಿನ ಔದಾರ್ಯಭಾವ ತೋರಿಸುತ್ತಿದ್ದರು. ಪಾರ್ಶ್ವನಾಥ ಮತ್ತು ಸಂಘಗಳಲ್ಲಿ ಸ್ತ್ರೀಯರಿಗೂ ಉಚಿತ ಸ್ಥಾನವೊದಗಿಸಿಕೊಟ್ಟಿದ್ದರು. ಬೌದ್ಧ ಧರ್ಮದಾರಂಭ ಕಾಲದಲ್ಲಿ ಬೌದ್ಧ-ಸಂಘದ ಭಿಕ್ಷು, ಉಪಾಸಕ ಮತ್ತು ಉಪಾಸಿಕೆಯರಿಗೆ ಮಾತ್ರವೇ ಅವಕಾಶ ಮಾಡಿಕೊಡಲಾಗಿತ್ತು; ಆದರೆ ಭಿಕ್ಷುಣಿಯರಿಗೆ ಅವಕಾಶವಿರಲಿಲ್ಲ. ಬುದ್ಧನ ಚಿಕ್ಕಮ್ಮ ಮಹಾಪ್ರಜಾಪತಿ ಗೌತಮಿಗೆ ಬುದ್ಧನ ಈ ಪಕ್ಷಪಾತದೃಷ್ಟಿ ಸರಿಯೆನಿಸಲಿಲ್ಲ. ಬೌದ್ಧ

ಸಂಘದಲ್ಲಿ ಸ್ತ್ರೀಯರಿಗೂ ದೀಕ್ಷೆ ನೀಡಬೇಕೆಂದು ಅವರು ಭಗವಾನ ಬುದ್ಧ ದೇವನಿಗೆ ಸಲಹೆ ನೀಡಿದರು. ಬುದ್ಧದೇವ ಅವರ ಸಲಹೆಯನ್ನು ಮನ್ನಿಸಿದನೇನೋ ನಿಜ, ಆದರೆ ಆ ಕ್ರಮವನ್ನನುಸರಿಸುವುದರಿಂದ ಬೌದ್ಧ ಸಂಘವು ಬಹಳವಾದರೆ ಐನೂರು ವರ್ಷಗಳ ವರೆಗೆ ಮಾತ್ರ ಪರಿಶುದ್ಧ ಬ್ರಹ್ಮಚರ್ಯ ಪಾಲಿಸಿ ಕೊಂಡಿರಬಹುದೆಂಬ ಮುನ್ಸೂಚನೆಯನ್ನೂ ನೀಡಿದನು.

ಜೈನ ಧರ್ಮದ ಹತ್ತೊಂಬತ್ತನೆಯ ತೀರ್ಥಂಕರ ಮಲ್ಲಿಗೆ ಮಲ್ಲಿಕುಮಾರಿಯೆಂದೂ ಕರೆಯಲಾಗಿದೆ. ಆದರೂ ದಿಗಂಬರ ಸಂಪ್ರದಾಯದಲ್ಲಿ ಅವರನ್ನು ಪುರುಷರೆಂದೇ ಭಾವಿಸಲಾಗಿದೆ. ರಾಜೀಮತಿಯು ಗಿರನಾರ್ ಪರ್ವತದ ಮೇಲೆ ತಪಸ್ಸಿನಲ್ಲಿದ್ದಾಗ ಅವಳನ್ನು ಕಂಡ ಅರಿಷ್ಟನೇಮಿಯ ಸೋದರ ರಥನೇಮಿಯ ಮನಸ್ಸು ಚಂಚಲಗೊಂಡಿತು. ಆ ಸಂದರ್ಭದಲ್ಲಿ ಅನೇಕ ಉದಾಹರಣೆ ದೃಷ್ಟಾಂತಗಳನ್ನಿತ್ತು ರಾಜೀಮತಿಯು ಅವನಿಗೆ ಸಂಯಮದ ಮಹತ್ವ ತಿಳಿಸಿಕೊಟ್ಟಳು. ಪಾರ್ಶ್ವನಾಥರ ಶ್ರಮಣಿ ಸಂಘದ ನೇತೃತ್ವ ವಹಿಸಿಕೊಂಡಿದ್ದ ಪುಷ್ಪಚೂಲಾ ಹಾಗೂ ಮಹಾವೀರರ ಪ್ರಥಮ ಶಿಷ್ಯೆ ಆರ್ಯ ಚಂದನಾಳ ಬಗೆಗೆ ಈ ಮೊದಲೇ ವಿವರಿಸಲಾಗಿದೆ. ಅವರ ಮಾರ್ಗ ದರ್ಶನದಲ್ಲಿ ಸಮ್ಯಕ್‌ಚಾರಿತ್ರ್ಯದ ಪಾಲನೆ ಮಾಡಿಕೊಂಡು ಅನೇಕ ಸಾಧ್ವಿಯರು ಪರಮಪದ ತಲುಪಿದರು. ಇನ್ನಿತರ ಮಹಿಳಾ ಶ್ರಾವಿಕೆಯರಲ್ಲಿ ಜಯಂತಿ, ಸುಲಸಾ, ರೇವತಿ ಮುಂತಾದವರು ಸ್ಮರಣೀಯರು. ಹಾಗೆ ನೋಡಿದರೆ, ಮನುಷ್ಯ ಮಾತ್ರರಲ್ಲಿ ಭೇದವಿಲ್ಲವೆಂಬ ನಂಬಿಕೆಯುಳ್ಳ ನಿರ್ಗ್ರಂಥ ಸಂಪ್ರದಾಯದಲ್ಲಿ ಜಾತಿಭೇದದಂತೆ ಲಿಂಗಭೇದಕ್ಕೂ ಸ್ಥಾನವಿರಬಾರದು. ಆದರೆ, ಬರುಬರುತ್ತಾ ದಿಗಂಬರ-ಶ್ವೇತಾಂಬರ ಮತಭೇದವುಂಟಾದಾಗ ಸ್ತ್ರೀ ಮುಕ್ತಿಯ ಅಧಿಕಾರಕ್ಕೆ ಗೌಣಸ್ಥಾನವಿತ್ತಂತೆ ಕಂಡುಬರುತ್ತದೆ.

## ಜೈನ ಧರ್ಮ ಪ್ರಚಾರ

ಜೈನ ಶ್ರಮಣರು ಓರ್ವ ಆಚಾರ್ಯರ ನೇತೃತ್ವದಲ್ಲಿ ತಮ್ಮದೊಂದು ಸಂಘಸ್ಥಾಪನೆ ಮಾಡಿಕೊಂಡು ಪರಿಸರದಿಂದ ಪರಿಸರಕ್ಕೆ ಸಂಚಾರಗೈಯುತ್ತಿದ್ದರು. ವರ್ಷಾಕಾಲದ ನಾಲ್ಕು ತಿಂಗಳು (ಚಾತುರ್ಮಾಸ) ಒಂದೇ ಸ್ಥಳದಲ್ಲಿದ್ದು, ಇನ್ನುಳಿದ ಎಂಟು ತಿಂಗಳು ತಮ್ಮ ಆತ್ಮಶುದ್ಧಿ ಮತ್ತು ಧರ್ಮದಲ್ಲಿ ದೃಢತೆ ಸಾಧಿಸುವ ದೃಷ್ಟಿಯಿಂದ ಓರ್ವ ಹಿರಿಯ ಆಚಾರ್ಯರೊಡನೆ ಸಂಪರ್ಕವಿರಿಸಿಕೊಳ್ಳುತ್ತ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸುತ್ತಿದ್ದರು. ಈ ಶ್ರಮಣರು ಹೋದ ಕಡೆಗೆಲ್ಲ ಜನಸಾಮಾನ್ಯರಿಗೆ ಧರ್ಮೋಪದೇಶ ಮಾಡುತ್ತಿದ್ದರು. ಇದಕ್ಕಾಗಿ ಆಯಾ ಜನಪದದ ಭಾಷೆಯನ್ನು ಕಲಿತುಕೊಳ್ಳಬೇಕಾಗುತ್ತಿತ್ತು. ಬೇರೆ ಬೇರೆ ಭಾಗಗಳ ಜನರ ನಡೆ-ನುಡಿಗಳನ್ನೂ ಅರ್ಥಮಾಡಿಕೊಂಡು ಅವರೊಡನೆ ಹೊಂದಿಕೊಂಡಿರಬೇಕಾಗುತ್ತಿತ್ತು. ಈ ಪಾದಯಾತ್ರೆಯ ಪರಂಪರೆ ಪಾರ್ಶ್ವನಾಥ ಮತ್ತು ಮಹಾವೀರರ ಕಾಲದಿಂದಲೇ ನಡೆದುಬಂದದ್ದು.

ಕೇವಲ ಜ್ಞಾನ ಪ್ರಾಪ್ತಿಯಾದನಂತರ ಮಹಾವೀರರು ಸಾಕೇತಕ್ಕೆ (ಅಯೋಧ್ಯೆ) ಪ್ರಯಾಣ ಬೆಳೆಸಿದಾಗ ಅಲ್ಲಿಯ ಶ್ರಮಣ-ಶ್ರಮಣಿಯರನ್ನುದ್ದೇಶಿಸಿ ಅವರೆಂದಿದ್ದರು : "ನಿರ್ಗ್ರಂಥ ಮತ್ತು ನಿರ್ಗ್ರಂಥಿಣಿಯರು ಸಾಕೇತಕ ಪೂರ್ವಕ್ಕೆ ಅಂಗ-ಮಗಧಗಳ ವರೆಗೂ, ದಕ್ಷಿಣಕ್ಕೆ ಕೌಶಾಂಬಿಯ ವರೆಗೂ, ಪಶ್ಚಿಮಕ್ಕೆ ಸ್ಥೂಣಾ (ಸ್ಥಾನೇಶ್ವರ) ವರೆಗೂ ಮತ್ತು ಉತ್ತರಕ್ಕೆ ಕುಣಾಲಾ (ಶ್ರಾವಸ್ತಿ ಪರಿಸರ) ವರೆಗೂ ಸಂಚರಿಸಬಲ್ಲರು. ಈ ಕ್ಷೇತ್ರಗಳೇ ಆರ್ಯ ಕ್ಷೇತ್ರಗಳು; ಮಿಕ್ಕವಲ್ಲ. ಈ

ಕ್ಷೇತ್ರಗಳಲ್ಲಿ ಮಾತ್ರ ಸಾಧು-ಸಾಧ್ವಿಯರು ತಮ್ಮ ಜ್ಞಾನ-ದರ್ಶನ-ಚಾರಿತ್ರ್ಯಗಳನ್ನು ನಿರ್ದೋಷ ರೂಪದಲ್ಲಿ ಕಪಾಡಿ ಕೊಂಡಿರಬಲ್ಲರು." ಇದರ ಮೇಲಿಂದ, ಆಗಿನ ದಿನಗಳಲ್ಲಿ ಜೈನ ಶ್ರಮಣರ ಸಂಚಾರ ಈ ಪ್ರದೇಶಗಳಿಗೆ ಮಾತ್ರವೇ ಸೀಮಿತವಾಗಿತ್ತೆಂದೂ, ದೂರ ಹೋಗುವುದು ಸಾಧ್ಯವಿರಲಿಲ್ಲವೆಂದೂ ತಿಳಿಯುತ್ತದೆ.

## ರಾಜಮನೆತನಗಳಲ್ಲಿ ಜೈನಧರ್ಮ

ಭಗವಾನ ಮಹಾವೀರರ ಕಾಲದಲ್ಲಿ ಅನೇಕ ರಾಜ-ಮಹಾರಾಜರ ಉಲ್ಲೇಖ ಜೈನಗ್ರಂಥಗಳಲ್ಲಿ ಬರುತ್ತದೆ. ಅವರು ನಿರ್ಗ್ರಂಥ ಧರ್ಮದ ಅನುಯಾಯಿಗಳಾಗಿದ್ದರು. ಅವರಲ್ಲಿ ಅನೇಕರಿಗೆ ಮಹಾವೀರರು ಶ್ರಮಣ ಧರ್ಮ-ದೀಕ್ಷೆಯನ್ನೂ ನೀಡಿದ್ದರು. ಉದಾಹರಣೆಗೆ : ಜೈನ ಗ್ರಂಥಗಳಲ್ಲಿ 18 ಗಣರಾಜರ ಪ್ರಮುಖನಾದ ವೈಶಾಲಿಯ ರಾಜಾ ಚೇಟಕ, ರಾಜಗೃಹದ ಶ್ರೇಣಿಕ ಬಿಂಬಸಾರ, ಚಂಪಾದ ಕುಣಿಕ ಅಜಾತಶತ್ರು, ಕೌಶಾಂಬಿಯ ರಾಜಾ ಉದಯನ, ಚಂಪಾದ ರಾಜಾ ದಧಿವಾಹನ, ಉಜ್ಜೈನದ ರಾಜಾ ಪದ್ಯೋತ, ವೀತಿಭಯದ ರಾಜಾ ಉದ್ರಾಯಣ ಮುಂತಾದವರೆಲ್ಲ ಜೈನ ಧರ್ಮಾನುಯಾಯಿಗಳೆಂದು ಉಲ್ಲೇಖಿಸಲಾಗಿದೆ. ಇವರಲ್ಲಿ ನಾಲ್ಕಾರು ರಾಜರ ಹೊರತಾಗಿ ಉಳಿದವರ ಬಗೆಗೆ ಐತಿಹಾಸಿಕ ದಾಖಲೆಗಳೇನೂ ದೊರೆಯುವುದಿಲ್ಲ. ಕಾಶಿ-ಕೋಶಲ ಗಣರಾಜರ ಪ್ರಮುಖನಾದ ಚೇಟಕನಂಥ ಗಣರಾಜನ ಉಲ್ಲೇಖವೂ ಇತಿಹಾಸದಲ್ಲಿಲ್ಲ. ಬೌದ್ಧ-ಗ್ರಂಥಗಳಲ್ಲೂ ಚೇಟಕನ ಹೆಸರು ಕಾಣಿಸುವುದಿಲ್ಲ. ಚಂಪಾದ ರಾಜರಾದ ದಧಿವಾಹನ ಮತ್ತು ಉದ್ರಾಯಣರ ವಿಷಯದಲ್ಲಿಯೂ ವಿವರಗಳು ದೊರೆಯುವುದಿಲ್ಲ. ಬೌದ್ಧ ಗ್ರಂಥಗಳಲ್ಲಿ ಇವರ ಹೆಸರುಗಳು ಮಾತ್ರ ಬಂದಿವೆ ಅಷ್ಟೆ. ಪ್ರಾಚೀನ ಜೈನ ಆಗಮಗಳಲ್ಲಿ ಮಹಾವೀರರಿಂದ ದೀಕ್ಷೆಪಡೆದ ಎಂಟು ಅರಸರಲ್ಲಿ ಉದ್ರಾಯಣನ ಹೆಸರೂ ಬರುತ್ತದೆ. ಆದರೆ ತದನಂತರದ ಟೀಕಾಗ್ರಂಥಗಳಲ್ಲಿ ಈ ಅರಸರ ಐತಿಹಾಸಿಕತೆಯ ಮೇಲೆ ಬೆಳಕು ಬೀರಬಲ್ಲ ಯಾವ ವಿವರಗಳೂ ಬರುವುದಿಲ್ಲ. ಚಂಪಾದ ಅರಸು ದಧಿವಾಹನನ ಮಗಳು ಚಂದನಬಾಲಾ (ಆರ್ಯಚಂದನಾ)ಳ ಉಲ್ಲೇಖ ಭಗವಾನ ಮಹಾವೀರರ ಭಿಕ್ಷುಣಿ ಸಂಘದ ಗಣಿನೀಯ ರೂಪದಲ್ಲಿ ಮಾತ್ರ ಬರುತ್ತದೆಯೇ ವಿನಃ ಹೆಚ್ಚಿನ ವಿವರಗಳು ಎಲ್ಲಿಯೂ ದೊರೆಯುವುದಿಲ್ಲ.

ಜೈನ ಪರಂಪರೆಯ ಪ್ರಕಾರ, ರಾಜಾ ಶ್ರೇಣಿಕನು ಭಗವಾನ ಮಹಾವೀರರಿಂದ ಅನೇಕ ಶಂಕೆಗಳ ಪರಿಹಾರ ಕೇಳಿದನು; ಇವೇ ಪ್ರಶ್ನೆಗಳು ಮುಂದೆ ಆಗಮಗಳಲ್ಲಿಯೂ ಸೇರ್ಪಡೆಗೊಂಡವು. ಕೂಣಿಕನ ತಾಯಿ ಶ್ರೇಣಿಕದೊರೆಯ ರಾಣಿಯಾದ ಚೇಲನಾ. ಈಕೆ ವಿದೇಹ ರಾಜ್ಯದ ದೊರೆ ಚೇಟಕನ ಮಗಳು. ಆದ್ದರಿಂದ ಕೂಣಿಕನಿಗೆ ವಿದೇಹಪುತ್ರನೆಂದೂ ಹೆಸರು. ಭಗವಾನ ಮಹಾವೀರರು ಚಂಪಾದಲ್ಲಿ ಸಮವಸೃತರಾದಾಗ ರಾಜಾ ಕೂಣಿಕನು ತನ್ನ ದಲ-ಬಲ-ಸಮೇತನಾಗಿ ಬಂದು ಅವರ ದರ್ಶನ ಪಡೆದನೆಂದು ಔಪಪಾತಿಕ ಸೂತ್ರದಲ್ಲಿ ವರ್ಣಿಸಲಾಗಿದೆ. ಶ್ರೇಣಿಕ ಬಿಂಬಸಾರ ಮತ್ತು ಕೂಣಿಕ ಅಜಾತಶತ್ರುಗಳಂತೆ ಕೌಶಾಂಬಿಯ ದೊರೆ ಉದಯನ ಮತ್ತು ಉಜ್ಜೈನದ ದೊರೆ ಅವಂತಿಪತಿ ಪ್ರಧ್ಯೋತನ ಉಲ್ಲೇಖವು ಬೌದ್ಧ ತ್ರಿಪಿಟಕಗಳಲ್ಲಿ ಬರುತ್ತದೆ. ಶ್ರೇಣಿಕ ಬಿಂಬಸಾರ ಮತ್ತು ಕೂಣಿಕ ಅಜಾತಶತ್ರು ಮುಂತಾದವರನ್ನು ಜೈನ

ಪರಂಪರೆಯಲ್ಲಿ ಜೈನ ಧರ್ಮಾನುಯಾಯಿಗಳೆಂದು ಹೇಳಿಕೊಂಡಂತೆ ಬೌದ್ಧ ಪರಂಪರೆಯಲ್ಲಿ ಅವರು ಬೌದ್ಧ ಧರ್ಮಾನುಯಾಯಿಗಳೆಂದೂ ಹೇಳಲಾಗಿದೆ. ಇದರ ಮೇಲಿಂದ, ಆಗಿನ ಕಾಲದಲ್ಲಿ ಮತಾಂಧತೆಯೆಂಬುದಿರಲಿಲ್ಲವೆಂದೂ ಆಗಿನ ಶಾಸಕರು ವಿಭಿನ್ನ ಸಂಪ್ರದಾಯಗಳಿಗೆ ಸಮಾನ ಗೌರವ ನೀಡುವ ಉದಾರ ವೃತ್ತಿಯುಳ್ಳವರಾಗಿದ್ದರೆಂದೂ ಸ್ಪಷ್ಟವಾಗುತ್ತದೆ.

## ಆರ್ಯ ಕ್ಷೇತ್ರಗಳ ಸೀಮಾ ವಿಸ್ತರಣ

ಭಗವಾನ ಮಹಾವೀರರ ಸಾಧು-ಸಾಧ್ವಿಯರ ವಿಹಾರ ಕ್ಷೇತ್ರವು, ಈ ಮೊದಲೇ ಉಲ್ಲೇಖಿಸಿದಂತೆ, ಪ್ರಾಯಶಃ ಬಿಹಾರ, ಬಂಗಾಲ, ಉತ್ತರ ಪ್ರದೇಶಗಳ ವರೆಗೆ ಮಾತ್ರವೇ ಸೀಮಿತವಾಗಿದ್ದಿತು. ಈ ಕ್ಷೇತ್ರಗಳೇ ಆರ್ಯ ಕ್ಷೇತ್ರಗಳೆಂದು ಭಗವಾನ ಮಹಾವೀರರು ಘೋಷಿಸಿದ್ದರು. ಆದರೆ ಮಹಾವೀರರ ನಂತರ ಸುಮಾರು 300 ವರ್ಷಗಳಾದ ಬಳಿಕ ಜೈನ ಸಂಘದ ಇತಿಹಾಸದಲ್ಲಿ ಮಹತ್ವದ ಕಾಲ ಬಂದು ಜೈನ ಶ್ರಮಣರು ಮುನ್ನಿನ ಸೀಮಾರೇಷೆ ದಾಟಿ ದೂರದೂರದ ವರೆಗೂ ಧರ್ಮ ಪ್ರಚಾರಾರ್ಥ ಪ್ರಯಾಣ ಮಾಡಲಾರಂಭಿಸಿದರು. ಸಾಮ್ರಾಟ ಅಶೋಕನು (ಕ್ರಿ. ಪೂ. 274-237) ಬೌದ್ಧ ಧರ್ಮದ ಪ್ರಸಾರ ಕೈಕೊಂಡಂತೆಯೇ, ಜೈನ ಪರಂಪರೆಯ ಪ್ರಕಾರ, ಅವಂತಿಯ ದೊರೆ ಸಂಪ್ರತಿ (ಕ್ರಿ. ಪೂ. 220-211) ಜೈನ ಧರ್ಮ ಪ್ರಸಾರ ಕೈಕೊಂಡನೆಂದು ಹೇಳಲಾಗುತ್ತಿದೆ. ಆದರೆ ಈ ಸಂಗತಿಗೆ ಐತಿಹಾಸಿಕ ಆಧಾರವಾವುದೂ ದೊರೆತಿಲ್ಲ. ರಾಜಾ ಸಂಪ್ರತಿ ನೇತ್ರಹೀನ ಕುಣಾಲನ ಮಗ. ಕುಣಾಲ ಅಶೋಕನ ಮಗ, ಬಿಂದುಸಾರನ ಮೊಮ್ಮಗ, ಚಂದ್ರ ಗುಪ್ತನ ಮರಿಮೊಮ್ಮಗ. ಆದರೆ ನೇತ್ರಹೀನನಾದಕಾರಣ ಅವನಿಗೆ ಪಟ್ಟಾಧಿಕಾರದ ಯೋಗವಿರಲಿಲ್ಲ. ಜೈನ ಪರಂಪರೆಯಲ್ಲಿ, ಆಚಾರ್ಯ ಆರ್ಯ ಸುಹಸ್ತಿಯವರ ಧರ್ಮೋಪದೇಶ ಕೇಳಿ ರಾಜಾ ಸಂಪ್ರತಿಯು ಜೈನಧರ್ಮದ ಪರಮಭಕ್ತನಾಗಿ ಬಿಟ್ಟನು. ಅವನಿಗೆ ಪರಮ ಧಾರ್ಮಿಕ ಎಂಬ ಅಭಿಧಾನವೂ ದೊರೆಯಿತು. ಸಂಪ್ರತಿದೊರೆ ನಗರದ ನಾಲ್ಕೂ ದಿಕ್ಕುಗಳಲ್ಲಿ ದಾನ ಶಾಲೆಗಳನ್ನು ತೆರೆಯಿಸಿದನು; ಜೈನ ಶ್ರಮಣರ ಭೋಜನ-ಪಾನಾದಿಗಳಿಗಾಗಿ ಸಮುಚಿತ ವ್ಯವಸ್ಥೆ ಮಾಡಿಸಿದನು. ತನ್ನ ಅಧೀನ ಸಾಮಂತರೆಲ್ಲ ಶ್ರಮಣರ ಭಕ್ತಿ-ಪೂಜೆಗಳಲ್ಲಿ ನೆರವಾಗಬೇಕೆಂದು ಆದೇಶವಿತ್ತನು. ತನ್ನ ಭಟರಿಗೆ ಆವಶ್ಯಕ ತರಬೇತಿ ಕೊಡಿಸಿ, ಸಾಧು ವೇಷದಲ್ಲಿ ಸೀಮಾಂತ ಪ್ರದೇಶಗಳಿಗೆ ಕಳಿಸಿಕೊಟ್ಟನು. ದೂರದೂರದ ಸೀಮೆಗಳಲ್ಲಿ ಸಂಚರಿಸುವ ಶ್ರಮಣರಿಗೆ ಯೋಗ್ಯ ಅನುಕೂಲತೆಯನ್ನೊದಗಿಸಿಕೊಡುವುದೇ ಈ ಯೋಜನೆಯ ಉದ್ದೇಶವಾಗಿತ್ತು. ದಕ್ಷಿಣಾಪಥದಲ್ಲಿ-ಮುಖ್ಯವಾಗಿ ಆಂಧ್ರ, ದ್ರಾವಿಡ, ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಜೈನಧರ್ಮ ಪ್ರಚಾರವಾದುದರ ಶ್ರೇಯಸ್ಸು ಅವಂತೀಪತಿ ಸಂಪ್ರತಿಗೇ ಸಲ್ಲುತ್ತದೆ. ತದನಂತರ ಸಿಂಧು, ಸಾವೀರ, ಲಾಢ ಮತ್ತು ಅರ್ಧ ಕೌಕಯಿ (ರಾಜಧಾನಿ; ಶ್ವೇತಿಕಾ) ರಾಜ್ಯಗಳನ್ನೊಳಗೊಂಡು ಒಟ್ಟು ಇಪ್ಪತ್ತೈದೂವರೆ ರಾಜ್ಯಗಳು ಜೈನ ಶ್ರಮಣರ ಸಂಚಾರಕ್ಕೆ ಯೋಗ್ಯ ಕ್ಷೇತ್ರಗಳೆಂದು ಭಾವಿಸಲ್ಪಟ್ಟವು. ಹೀಗೆ ಜೈನ ಧರ್ಮವು ಬಿಹಾರದಲ್ಲಿ (ಆಗ ಬಂಗಾಳ, ಬಿಹಾರ ಮತ್ತು ಓರಿಸ್ಸಾ ರಾಜ್ಯಗಳು ಪ್ರತ್ಯೇಕವಾಗಿರಲಿಲ್ಲ) ಉದಯವಾಗಿ ಕ್ರಮೇಣ ಉತ್ತರಪ್ರದೇಶದ ಪೂರ್ವ ಭಾಗದಲ್ಲಿ ಹಬ್ಬಿಕೊಂಡಿತು. ಮಹಾವೀರ-ನಿರ್ವಾಣದ ನಂತರ ಸೌರಾಷ್ಟ್ರ, ಗುಜರಾತ್ (ಆಗ ಗುಜರಾತ್ ಮತ್ತು ರಾಜಸ್ಥಾನಗಳು ಒಂದೇ

ಪ್ರದೇಶವೆನಿಸಿದ್ದವು) ಉತ್ತರಪ್ರದೇಶದ ಪಶ್ಚಿಮಭಾಗ, ಮಧ್ಯಪ್ರದೇಶ, ವಿದರ್ಭ, ಕೊಂಕಣ ಮತ್ತು ಮಹಾರಾಷ್ಟ್ರಗಳ ಮೂಲಕ ದಕ್ಷಿಣ ಭಾರತದ ಆಂಧ್ರ, ದ್ರಾವಿಡ, ಕರ್ನಾಟಕಾದಿ ಪ್ರದೇಶಗಳನ್ನು ವ್ಯಾಪಿಸಿತು. ಆದರಿಂದು ಜೈನಧರ್ಮದ ಜನ್ಮಸ್ಥಾನವಾದ ಬಿಹಾರದಲ್ಲಿಯೇ ಅದು ಅಪರೂಪವಾಗಿ ಬಿಟ್ಟಿದೆ.

ಹಾಥಿಗುಂಥಾದ ಸಾಮ್ರಾಟ ಖಾರವೇಲನ ಶಿಲಾಶಾಸನದ ಪ್ರಕಾರ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಕಲಿಂಗವು (ಓರಿಸ್ಸಾ) ಜೈನಧರ್ಮದ ಕೇಂದ್ರವಾಗಿತ್ತೆಂದು ತಿಳಿದು ಬರುತ್ತದೆ. ಖಾರವೇಲ ದೊರೆಯು ಮಗಧದಿಂದ ಜಿನ-ಮೂರ್ತಿಯನ್ನು ತರಿಸಿ ಇಲ್ಲಿ ಪ್ರತಿಷ್ಠಾಪಿಸಿದ್ದ. ಭುವನೇಶ್ವರದ ಬಳಿಗಿರುವ ಉದಯಗಿರಿ ಮತ್ತು ಖಂಡಗಿರಿ ಎಂಬ ಬೆಟ್ಟಗಳನ್ನು ಕೊರೆದು ರಚಿಸಿದ ಗುಹೆಗಳಲ್ಲಿ ನೂರರಷ್ಟು ಜೈನ ಗುಹೆಗಳಾಗಿದ್ದು ಕಲೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಉತ್ತರಾಪಥದಲ್ಲಿ-ಮಥುರಾದಲ್ಲಿ-ಸುವರ್ಣ ಸ್ತೂಪವಿದ್ದಿತೆಂಬ ಉಲ್ಲೇಖ ದೊರೆಯುತ್ತದೆ. ಅಕಬರ-ಬಾದಶಹನ ಕಾಲದಲ್ಲಿ ಸಾಹು ಟೋಡರರು ಇದರ ಜೀರ್ಣೋದ್ಧಾರ ಮಾಡಿಸಿದ್ದರೆಂದೂ ತಿಳಿಯುತ್ತದೆ. ಈ ಸ್ತೂಪವಿದ್ದ ಪ್ರದೇಶವೀಗ ಹಾಳುಬಿದ್ದ ದಿಬ್ಬದಂತೆ ಕಾಣುತ್ತದೆ. ಅದರ ಅಗೆತದಲ್ಲಿ ಪುರಾತತ್ವಕ್ಕೆ ಸಂಬಂಧಿಸಿದ ಮಹತ್ವದ ಸಾಮಗ್ರಿ ದೊರೆತಿದೆ. ಇಲ್ಲಿ ಉಪಲಬ್ಧವಾದ ಕನಿಷ್ಕನ ಕಾಲದ ಶಿಲಾ ಶಾಸನಗಳಿಂದ ಈ ಪ್ರದೇಶವು ಕ್ರಿ.ಶ. ಒಂದನೆಯ ಶತಮಾನದಲ್ಲಿ ಜೈನರ ಪ್ರಮುಖ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.

ಸೌರಾಷ್ಟ್ರದಲ್ಲಿ (ಕಾಠೇವಾಡ) ರಾಜಾ ಸಂಪ್ರತಿಯು ಜೈನ ಧರ್ಮದ ಪ್ರಚಾರ ಮಾಡಿದ್ದ. ದ್ವಾರಕಾದ ಆಗ್ನೇಯ ದಿಕ್ಕಿನಲ್ಲಿರುವ ಗಿರನಾರ ಪರ್ವತದಲ್ಲಿ ಅರಿಷ್ಟನೇಮಿಯು ನಿರ್ವಾಣಪದ ಸಂಪಾದಿಸಿದನು. ಕ್ರಿ.ಶ. ಒಂದನೆಯ ಅಥವಾ ಎರಡನೆಯ ಶತಮಾನದಲ್ಲಿ ಇಲ್ಲಿಯ ಚಂದ್ರಗುಹೆಯಲ್ಲಿ ಆಚಾರ್ಯ ಧರಸೇನರು ತಮ್ಮ ಶಿಷ್ಯ ಆಚಾರ್ಯ ಭೂತಬಲಿ ಮತ್ತು ಪುಷ್ಪದಂತರಿಗೆ ಅವಶಿಷ್ಟ ಶ್ರುತಜ್ಞಾನವನ್ನು ಲಿಪಿಬದ್ಧಗೊಳಿಸುವ ಆದೇಶವಿತ್ತಿದ್ದರು. ಕ್ರಿ.ಶ. ಐದನೆಯ ಶತಮಾನದಲ್ಲಿ ದೇವರ್ಧಿಗಣಿ ಕ್ಷಮಾಶ್ರಮಣರ ನೇತೃತ್ವದಲ್ಲಿ ನಡೆದ ವಲಭೀ ವಾಚನಾದ ಬಗೆಗೆ ಈ ಮೊದಲೇ ಉಲ್ಲೇಖಿಸಲಾಗಿದೆ. ಇಲ್ಲಿ ಆಚಾರ್ಯ ದೇವರ್ಧಿಗಣಿಯರ ಮೂರ್ತಿಯ ಸ್ಥಾಪನೆಯಾಗಿದೆ. ಗುಜರಾತ ಮತ್ತು ರಾಜಸ್ತಾನಗಳು ಜೈನ ಆಚಾರ್ಯರ ಪ್ರವೃತ್ತಿಗಳ ಕೇಂದ್ರಗಳೆನಿಸಿವೆ. ಮಧ್ಯಕಾಲೀನ ಯುಗದಲ್ಲಿ ಈ ಪ್ರದೇಶದಲ್ಲಿ ನಡೆದಷ್ಟು ಜೈನ ಸಾಹಿತ್ಯ ರಚನೆ ಬೇರೆಲ್ಲಿಯೂ ನಡೆಯಲಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಚಾಲುಕ್ಯ ದೊರೆಯಾದ ಸಿದ್ಧ ರಾಜ ಮತ್ತು ಅವನ ಉತ್ತರಾಧಿಕಾರಿಯಾದ ಕುಮಾರಪಾಲನ ಕಾಲದಲ್ಲಿ ಗುಜರಾತದಲ್ಲಿ ಜೈನ ಧರ್ಮವು ತನ್ನ ಉತ್ಕರ್ಷವನ್ನು ಕಂಡಿತು. ಕಲಿಕಾಲ ಸರ್ವಜ್ಞ ಮತ್ತು ನಾಲ್ಕು ವಿದ್ಯೆಗಳ ಸಾಗರರೆಂದು ಪ್ರಖ್ಯಾತರಾಗಿದ್ದ ಆಚಾರ್ಯ ಹೇಮಚಂದ್ರರ ಉಪದೇಶಾನುಸಾರ ಈ ರಾಜರು ಜೈನ ಧರ್ಮವನ್ನು ಸ್ವೀಕರಿಸಿದರು. ಅಂತೆಯೇ ಗುಜರಾತವು ಜೈನ ಧರ್ಮದ ಸದೃಢ ಕೇಂದ್ರವೆನಿಸಿತು. ಆಗ ಅಣಹಿಲ್ಲಪುರ ಪಾಟಣ ಎಂಬ ಪಟ್ಟಣವು ಗುಜರಾತದ ರಾಜಧಾನಿಯಾಗಿತ್ತು. ಅಲ್ಲಿ ಆಚಾರ್ಯ ಹೇಮಚಂದ್ರರು ಸಿದ್ಧರಾಜ ದೊರೆಯ ವಿನಂತಿಯ ಮೇರೆಗೆ ಸಿದ್ಧಹೇಮಶಬ್ದಾನುಶಾಸನ ಎಂಬ ವ್ಯಾಕರಣಗ್ರಂಥ ರಚಿಸಿದರು. ಈ ವ್ಯಾಕರಣ ಗ್ರಂಥವನ್ನು ಆನೆಯ ಮೇಲಿಟ್ಟು ಮೆರವಣಿಗೆಯಲ್ಲಿ ರಾಜ ದರ್ಬಾರಕ್ಕೆ ತರಲಾಯಿತು.

ದೇಸೀನಾಮಮಾಲಾ ಎಂಬುದು ಆಚಾರ್ಯ ಹೇಮಚಂದ್ರರ ಎರಡನೇ ಅಮೂಲ್ಯ ಕೃತಿ- ಗುಜರಾತಿ ಭಾಷೆಯ ವಿಕಾಸದ ಹಂತಗಳ ಅಧ್ಯಯನ ಮಾಡುವುದಕ್ಕೆ ತುಂಬಾ ಸಹಾಯಕಾರಿಯಾಗುವ ಕೃತಿ. ಕುಮಾರಪಾಲ ದೊರೆಯು ಲಕ್ಷಗಟ್ಟಳೆ ರೂಪಾಯಿಗಳನ್ನು ವೆಚ್ಚಮಾಡಿ ಶತ್ರುಂಜಯ (ಪಾಲಿಟಾಣಾ) ಮಂದಿರಗಳ ಜೀರ್ಣೋದ್ಧಾರ ಮಾಡಿಸಿದನು. ಪಾಟಣ, ಖಂಭಾತ, ಈಡರ, ಲಿಂಬಡಿ ಮುಂತಾದ ಸ್ಥಳಗಳಲ್ಲಿ ಶಾಸ್ತ್ರಗಳ ಸಂರಕ್ಷಣೆಯ ಉದ್ದೇಶದಿಂದ ಜ್ಞಾನಭಂಡಾರಗಳ ಸ್ಥಾಪನೆ ಮಾಡಿ ಧರ್ಮ ಪ್ರಸಾರ ಹೆಚ್ಚುವಂತೆ ಮಾಡಿದನು. ಆಬೂ ಜೈನರ ಪ್ರಸಿದ್ಧ ತೀರ್ಥಕ್ಷೇತ್ರವೆನಿಸಿದೆ. ಇಲ್ಲಿ ಆದಿನಾಥ ಮತ್ತು ನೇಮಿನಾಥರ ವಿಶ್ವವಿಖ್ಯಾತ ಶ್ವೇತ ಶಿಲಾಮಂದಿರಗಳಿದ್ದು ಸ್ಥಾಪತ್ಯಕಲೆಯ ದೃಷ್ಟಿಯಿಂದ ಅನುಪಮವಾಗಿವೆ. ಮಂತ್ರಿಯಾದ ವಿಮಲಶಾ ಮತ್ತು ತೇಜಪಾಲರು ಲಕ್ಷಗಟ್ಟಳೆ ಹಣ ಸುರಿದು ಈ ಮಂದಿರಗಳನ್ನು ರಚಿಸಿದರು. ಹದಿಮೂರನೆಯ ಶತಮಾನದಲ್ಲಿ ಇಲ್ಲಿ ಮತ್ತಿತರ ಮಂದಿರಗಳೂ ನಿರ್ಮಾಣಗೊಂಡು ಈ ಸ್ಥಳವು 'ದೇಲವಾಡಾ' (ದೇವಲವಾಡಾ) ಅಂದರೆ ಗುಡಿಗಳ ನಗರವೆಂದು ವಿಖ್ಯಾತವಾಯಿತು.

ಉತ್ತರ ಭಾರತದಂತೆ ದಕ್ಷಿಣ ಭಾರತದಲ್ಲೂ ಜೈನಧರ್ಮ ಸಾಕಷ್ಟು ಪ್ರಚಾರದಲ್ಲಿತ್ತು. ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ ಮತ್ತು ಹೊಯ್ಸಳ ವಂಶಗಳ ರಾಜರು ಜೈನಧರ್ಮ ಮತ್ತು ಜೈನ ವಿದ್ವಾಂಸರಿಗೆ ವಿಪುಲವಾದ ಆಶ್ರಯ ನೀಡಿದರು. ಗಂಗರ ಕಾಲಾವಧಿಯಲ್ಲಿ ಗೊಮ್ಮಟೇಶ್ವರ ಬಾಹುಬಲಿಯ ಮೂರ್ತಿಯ ಪ್ರತಿಷ್ಠಾಪನೆಯಾಯಿತು. 57 ಅಡಿ ಎತ್ತರದ ಭವ್ಯಾಕಾರದ ಈ ಪ್ರತಿಮೆ ಒಂದೇ ಒಂದು ಕಲ್ಲಿನಲ್ಲಿ ಕಟೆದ ಮೂರ್ತಿಯಾಗಿದ್ದು, ವಿಶ್ವದ ಅದ್ಭುತಗಳಲ್ಲೊಂದು ಎಂಬ ಖ್ಯಾತಿ ಪಡೆದಿದೆ. ಜೈನ ಧರ್ಮದ ಬಗ್ಗೆ ಕದಂಬ ರಾಜರಲ್ಲೂ ಬಹುವಾದ ಆಸ್ಥೆಯಿತ್ತು. ಅಂತೆಯೇ ಈ ಧರ್ಮವು ಕರ್ನಾಟಕದೊಳಗೆಲ್ಲ ತ್ವರಿತಗತಿಯಿಂದ ವ್ಯಾಪಿಸಿತು. ರಾಷ್ಟ್ರಕೂಟ ರಾಜರೊಡನೆಯೂ ಜೈನಧರ್ಮದ ಘನಿಷ್ಠ ಸಂಬಂಧವಿತ್ತು. ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟ (ಮಳಖೇಡ)ದ ರಾಜಮನೆತನದವರು ಜೈನಕಲೆ ಮತ್ತು ಸಾಹಿತ್ಯದ ಅಭಿವೃದ್ಧಿಗಾಗಿ ನೀಡಿದ ಉತ್ತೇಜನ ಅವಿಸ್ಮರಣೀಯವಾಗಿದೆ. ಜಿನಸೇನ, ಗುಣಭದ್ರ, ಶಾಕಟಾಯನ, ಪುಷ್ಪದಂತ, ಸೋಮದೇವ, ಪಂಪ ಮುಂತಾದ ವಿದ್ವಾಂಸರೂ ಕವಿಗಳೂ ಈ ಕಾಲದಲ್ಲಿದ್ದು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮತ್ತು ಕನ್ನಡ ಭಾಷೆಗಳಲ್ಲಿ ಹಲವೊಂದು ಮಹತ್ವಪೂರ್ಣ ಗ್ರಂಥಗಳನ್ನು ರಚಿಸಿ ಸಾಹಿತ್ಯ ಪ್ರಪಂಚವನ್ನು ಸಮೃದ್ಧಗೊಳಿಸಿದರು. ಚಾಲುಕ್ಯ ರಾಜವಂಶದಿಂದಲೂ ಜೈನಧರ್ಮಕ್ಕೆ ಸಾಕಷ್ಟು ಸಂರಕ್ಷಣೆ ಸಿಕ್ಕಿತು. ಕನ್ನಡದ ಸುಪ್ರಸಿದ್ಧ ಕವಿ ರನ್ನ ಬಾಳಿಬೆಳಗಿದ್ದು ಈ ಕಾಲದಲ್ಲಿಯೇ. ಹೊಯ್ಸಳ ರಾಜವಂಶದವರು ಜೈನಮಂದಿರ ಮತ್ತು ಆಶ್ರಮಗಳ ಜೀರ್ಣೋದ್ಧಾರ ಮಾಡಿಸುವುದಲ್ಲದೆ, ಜೈನಧರ್ಮದ ಪ್ರಸಾರಕ್ಕೂ ವಿಶೇಷ ಅನುವು ಮಾಡಿಕೊಟ್ಟರು. ಈ ರೀತಿಯಾಗಿ, ದಕ್ಷಿಣ ಭಾರತದಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರ ಮುಂತಾದ ಪ್ರದೇಶಗಳು ಜೈನಧರ್ಮದ ಕೇಂದ್ರಗಳೆನಿಸಿದವು.

# ಮಹಾವೀರರ ಉಪದೇಶ

ಭಗವಾನ ಮಹಾವೀರರ ಉಪದೇಶಗಳೇನು? ಈ ಪ್ರಶ್ನೆಗೆ ಉತ್ತರ ಹುಡುಕಲು ಬಲು ದೂರ ಹೋಗುವ ಆಗತ್ಯವಿಲ್ಲ. ಅವರ ಸ್ವಂತ ಜೀವನವೇ ಒಂದು ತೆರೆದಿಟ್ಟ ಪುಸ್ತಕ. ಅದರ ಪುಟಪುಟದ ಮೇಲೂ ಅವರ ತತ್ವಗಳು ಸ್ಫುಟವಾಗಿ ಕಾಣುತ್ತವೆ. ತುಂಬು ಪ್ರಾಯದಲ್ಲಿಯೇ ಅವರು ಸಂಸಾರದ ಮೋಹ-ಮಾಯೆಗಳನ್ನು ತ್ಯಜಿಸಿದರು. ಕೇಳಿದೊಡನೆ ಹೃದಯ ಕಂಪಿಸುವಂಥ ಕಷ್ಟ-ಸಂಕಟ-ಯಾತನೆಗಳನ್ನು ಸಹಿಸುತ್ತ ಕಠೋರ ತಪವನ್ನಾಚರಿಸಿದರು. ಲೋಕಕಲ್ಯಾಣದ ಪರಮಧ್ಯೇಯದೊಡನೆ ವರ್ಷಾನುವರ್ಷ ಗ್ರಾಮಾನುಗ್ರಾಮಗಳಿಗೆ ಪಾದಯಾತ್ರೆ ಮಾಡಿದರು. ಭಗವಾನ ಮಹಾವೀರರ ಜೀವನದ ವಿವಿಧ ಹಂತಗಳನ್ನು ನಾವು ಗಂಭೀರ ರೀತಿಯಿಂದ ಆಲೋಚಿಸಿ ಅರ್ಥ ಮಾಡಿಕೊಂಡರೆ ನಮಗೆ ಅವರ ತತ್ವೋಪದೇಶವೆಲ್ಲ ತಿಳಿದ ಹಾಗಾಗುತ್ತದೆ.

ಅವರು ಹುಟ್ಟಿದ್ದು ಗಣರಾಜನೊಬ್ಬನ ಪರಿವಾರದಲ್ಲಿ, ಅಂತೆಯೇ ಧನ-ಕನಕದ ಕೊರತೆಯೆಂಬುದಿರಲಿಲ್ಲ. ಮಹಾವೀರರು ತಮ್ಮ ಮನೆತನದ ಸಿರಿ-ಸಂಪದದ ಸಂಪೂರ್ಣ ಉಪಭೋಗ ಮಾಡಬಹುದಿತ್ತು. ಆದರೂ ಈ ಸಂಸಾರವನ್ನು ತ್ಯಜಿಸಿ ತಪಸ್ವಿಯಾಗಬೇಕೆಂಬ ಉತ್ಕಟೇಚ್ಛೆ ಅವರಲ್ಲಿ ಹೇಗೆ ಜಾಗೃತವಾಯಿತು? ಹೀಗೆ ತಪಸ್ವಿಗಳಾಗುವುದು ಅಂದಿನ ಜನ ಜೀವನದ ಸಾಮಾನ್ಯ ಪದ್ಧತಿಯೇ ಆಗಿತ್ತೇ? ತಲೆಯ ಮೇಲೆ ನರೆತ ಕೂದಲು ಕಂಡೊಡನೆ ಧರ್ಮದೂತರೆಂದೇ ಭಾವಿಸಿ ಅಂದಿನ ಜನ ಸಾಷ್ಟಾಂಗ ವೆರಗುತ್ತಿದ್ದರೆ? ಕಾರ್ಗಾಲದ ಕಾರ್ಮೋಡಗಳು ಕ್ಷಣಾರ್ಧದಲ್ಲಿ ಕರಗಿ ನೀರಾಗುವುದನ್ನು ಕಂಡೊಡನೆ ಜನ ದೀಕ್ಷಾಗ್ರಹಣ ಗೈಯಲು ಧಾವಿಸಿ ಬರುತ್ತಿದ್ದರೇ? ಇದಕ್ಕೆ ಬೇರಾವುದಾದರೂ ಗಂಭೀರ ಸ್ವರೂಪದ ಸಾಮಾಜಿಕ, ಆರ್ಥಿಕ ಅಥವಾ ಬೌದ್ಧಿಕ ಕಾರಣಗಳಿದ್ದಿರಬಹುದೇ? ಇಲ್ಲ, ಕೇವಲ ಸ್ವ-ಹಿತಕ್ಕಾಗಿಯೇ ಜನರು ಸಂಸಾರತ್ಯಾಗ ಮಾಡಿ ಹೋಗುತ್ತಿದ್ದರೋ? ಅಂದಿನ ಸಾಮಾಜಿಕ ಅಶಾಂತಿ, ಮತ್ತು ಅವ್ಯವಸ್ಥೆಯ ವಾತಾವರಣದಿಂದಾಗಿ ಅವರ ಮನಸ್ಸಿನಲ್ಲೊಂದು ಕ್ಷೋಭೆಯುಂಟಾಗಿರಲಿಕ್ಕಿಲ್ಲವೇ? ಸಿರಿ-ಸಂಪದದ ತಾರತಮ್ಯ, ಅದರ ಪರಿಣಾಮವಾಗಿ ಪರಸ್ಪರ ಸಂಘರ್ಷ, ರಾಜ-ಗಣರಾಜರಲ್ಲಿ ತಿಕ್ಕಾಟ, ವರ್ಣಭೇದ, ಜಾತಿಭೇದ, ರಾಜಕೀಯ ಮತ್ತು ಸಾಮಾಜಿಕ ಶೋಷಣೆ, ಸ್ತ್ರೀಯರ ಮೇಲೆ, ಶೂದ್ರರ ಮೇಲೆ ನಡೆಯುವ ಅನ್ಯಾಯ ಅತ್ಯಾಚಾರಗಳನ್ನು ಕಂಡು ಅವರ ಮನಸ್ಸಿನಲ್ಲಿ ವಿದ್ರೋಹದ ಕಿಡಿ ಹೊತ್ತಿಕೊಂಡಿರಲಿಕ್ಕಿಲ್ಲವೆ?

ಭಗವಾನ ಮಹಾವೀರರು ಶರೀರ-ದಂಡನೆಗೆ ಇಷ್ಟೊಂದು ಮಹತ್ವವಿತ್ತುದೇಕಿರಬಹುದು? ಅದೇನು ಕೇವಲ ಶುಷ್ಕ ಆತ್ಮ-ದಮನದ ರೂಪವಾಗಿತ್ತೇ? ಅವರು ಅಹಿಂಸೆಯೆಂದರೇನೆ ಪರಮಧರ್ಮವೆಂದು ಭಾವಿಸಿದುದೇಕೆ? ಅದೂ ಸಾಮಾನ್ಯ ಮಾದರಿಯ ಅಹಿಂಸೆಯಾಗಿರದೆ, ತಮ್ಮ ಮನ-ವಚನ-ಕಾಯಗಳಿಂದ ಬೇರಾವ ಪ್ರಾಣಿಮಾತ್ರಕ್ಕೂ ಬಾಧೆಯುಂಟಾಗದಂತೆ

ಬದುಕಿನ ಒಳಮನದ ಪ್ರವೃತ್ತಿ! ನಿಜವಾದ ಅಹಿಂಸಾ ಧರ್ಮವನ್ನು ಪಾಲಿಸುವುವವರು ಸತ್ಯ ಹೇಳುವುದಾದರೂ ಅವರಿಂದ ಯಾವ ಪ್ರಮಾದವಾಗಬಾರದು ಸದ್ವರ್ತನೆಯ ಸೀಮಾರೇಷೆ ಮೀರಬಾರದು- ಎಂಬ ಆದೇಶವಿದೆ. ಕಾಮ-ಭೋಗಗಳಲ್ಲಿ ಮಮತ್ವವನ್ನು ಮರೆಯುವುದೇ ಹಿಂಸೆ, ಮನಸ್ಸು ಮತ್ತು ಇಂದ್ರಿಯನಿಗ್ರಹದಿಂದ ಮೂಲ ಪ್ರವೃತ್ತಿಗಳ ಮೇಲೆ ನಿಯಂತ್ರಣವಿರಿಸುವದೇ ಅಹಿಂಸೆಯ ಮಾರ್ಗವೆಂದೂ ಪರಿಗಣಿಸಲಾಗಿದೆ. ಅಹಿಂಸೆಯನ್ನು ಪರಿಪುಷ್ಟಗೊಳಿಸಲು, ಅದರೊಡನೆ ಸಂಯಮ, ತಪಸ್ಸು, ತ್ಯಾಗ ಮತ್ತು ಅಪರಿಗ್ರಹಗಳನ್ನೂ ಜೋಡಿಸಲಾಗಿದೆ. ಲೋಕ ವ್ಯವಹಾರದಲ್ಲಿ ವಿವೇಕ ಶೀಲತೆ ಪ್ರಾಪ್ತವಾಗಲು ಮತ್ತು ಇತರರ ದೃಷ್ಟಿಕೋನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅನೇಕಾಂತವಾದ ಮುದ್ದೆಯನ್ನೊತ್ತಲಾಗಿದೆ. ವಸ್ತುತಃ ಅನೇಕಾಂತವಾದವೆಂದರೆ ಅಹಿಂಸಾವಾದದ ವಿಕಸಿತ ಅಥವಾ ವ್ಯಾಪಕ ರೂಪವೇ ಹೌದು- ಮಹಾವೀರರ ಅಹಿಂಸೆಯೆಂದರೆ ದೇವ-ದೇವತೆಗಳನ್ನು ಪ್ರಸನ್ನಗೊಳಿಸಲು ಪಶುವಧೆ ಮಾಡುತ್ತಿದ್ದ ವೈದಿಕ ಹಿಂಸಾಚಾರಕ್ಕೆ ವಿರೋಧ-ಮಾತ್ರವಾಗಿ ಮೂಡಿ ಬಂದ ವಿಚಾರವಾಗಿರದೆ ಅದರ ಸ್ವರೂಪವು ಬಲು ವ್ಯಾಪಕವಾಗಿದ್ದಿತು; ವಿಸ್ತೃತವಾಗಿದ್ದಿತು. ಅದೊಂದು ಸಾಮಾಜಿಕ ವಿಷಮತೆಯನ್ನಳಿಸಿ ಹಾಕುವ ಪ್ರಬಲ ಸಾಧನವೆನಿಸಿತ್ತು; ಧನಸಂಪತ್ತಿಯಿಂದಲೂ, ಮೇಲು-ಕೀಳು ಭಾವನೆಯಿಂದಲೂ ನಿರ್ಮಾಣಗೊಳ್ಳುವ ಪರಸ್ಪರ ದ್ವೇಷ, ವೈಷಮ್ಯ, ಕಲಹ ಮತ್ತು ಅಹಂಕಾರಗಳ ವಿರುದ್ಧ ಧ್ವನಿಯೆತ್ತುವ ಕ್ರಮವೆನಿಸಿತ್ತು. ಇನ್ನೊಬ್ಬರ ಶೋಷಣೆ ಮಾಡಿ, ಪರಸಂಪತ್ತಿಯ ಮೇಲೆ ಕಣ್ಣಿಟ್ಟು, ಇತರರು ತಮಗಿಂತ ಕೀಳರೆಂದು ಭಾವಿಸಿ ತಾವು ಮೇಲೆ ಬರಬೇಕು ಅಥವಾ ಯಶಸ್ವಿಯಾಗಬೇಕು ಎಂಬುವರ ಅಭಿಲಾಷೆಯೆಂದೂ ಈಡೇರಲಾರದೆಂಬ ಸಂಗತಿಯನ್ನು ಮಹಾವೀರರು ತಮ್ಮ ಸ್ವಂತ ಜೀವನ ಕ್ರಮದಿಂದ ಸಿದ್ಧ ಮಾಡಿ ತೋರಿಸಿದರು. ಅದಕ್ಕಾಗಿ ನ್ಯಾಯ-ನೀತಿಗಳನ್ನು ಅವಲಂಬಿಸಬೇಕಾಗುತ್ತದೆ; ಕಠೋರ ನಿಯಮ ನಿಷ್ಠೆಯನ್ನೂ ಅನುಸರಿಸಬೇಕಾಗುತ್ತದೆ. ಅಹಿಂಸೆಯ ಈ ವ್ಯಾಪಕ ಸ್ವರೂಪವು ಕೇವಲ ವ್ಯಕ್ತಿ ನಿಷ್ಠವಾಗಿರದೆ, ಅದರೊಳಗೆ ಸಮಸ್ತ ವಿಶ್ವಕಲ್ಯಾಣದ ವಿಶಾಲ ಭಾವನೆಯೇ ಅಡಕಗೊಂಡಿದೆ.

### ಅಹಿಂಸೆ

ಅಹಿಂಸೆಯ ಅವಶ್ಯಕತೆಯನ್ನೆತ್ತಿ ತೋರಿಸುತ್ತ ಆಚಾರಾಂಗ ಸೂತ್ರದಲ್ಲಿ ಹೀಗೆ ಹೇಳಲಾಗಿದೆ; "ಪ್ರತಿಯೊಬ್ಬರಿಗೂ ತಮ್ಮ ತಮ್ಮ ಜೀವನ ಪ್ರಿಯವಾಗಿದೆ, ಎಲ್ಲರ ಜೀವವೂ ಸುಖವನ್ನೇ ಬಯಸುತ್ತದೆ. ಯಾರಿಗೂ ದುಃಖ ಬೇಕಿಲ್ಲ, ಜೀವಹಾನಿಯೂ ಬೇಕಿಲ್ಲ, ಎಲ್ಲರಿಗೂ ಜೀವನದ ಬಗ್ಗೆ ಪ್ರೀತಿಯಿರುತ್ತದೆ; ಅಂತೆಯೇ ಜೀವಿಸಿರುವ ಅಭಿಲಾಷೆಯಿರುತ್ತದೆ." ಹಾಗಾದರೇನು ಮಾಡಬೇಕು? "ದುಃಖದ ಅರ್ಥ ಮಾಡಿಕೊಳ್ಳಬಲ್ಲವರು ದುಃಖವೆಂದರೆ ಅಹಿತಕಾರಿಯೆಂದೇ ಭಾವಿಸುತ್ತಾರೆ; ಹೇಗೆ ತಮ್ಮ ಸುಖ-ದುಃಖಗಳನ್ನು ತಿಳಿದುಕೊಳ್ಳುತ್ತಾರೋ ಹಾಗೆಯೇ ಇತರರಿಗೂ ಸುಖ-ದುಃಖಗಳಿವೆಯೆಂಬ ಸತ್ಯವನ್ನರಿತುಕೊಳ್ಳುತ್ತಾರೆ, ಪರರ ಸುಖ-ದುಃಖಗಳಂತೆಯೇ ತಮ್ಮ ಸುಖ-ದುಃಖಗಳ ಮೂಲವನ್ನೂ ಅರ್ಥ ಮಾಡಿಕೊಳ್ಳುತ್ತಾರೆ." ಅಂದರೆ ಯಾವ ಸಂಗತಿ ತಮಗೆ ಪ್ರತಿಕೂಲವಾಗಿರುತ್ತದೋ ಅದು ಇತರರಿಗೂ ಪ್ರತಿಕೂಲವಾಗಿರುತ್ತದೆ; ಯಾವ ಸಂಗತಿ ತಮಗೆ ಸುಖಕರವಾಗಿರುತ್ತದೋ ಅದು ಇತರರಿಗೂ ಸುಖಕರವಾಗಿರುತ್ತದೆಂದು

ತಿಳಿದುಕೊಳ್ಳಬೇಕಾಗುವುದು. ಈ ಪರಸ್ಪರ ತಿಳುವಳಿಕೆಯೇ ಅಹಿಂಸೆಯ ಮೂಲಾಧಾರ.

ಜೈನ ಶಾಸ್ತ್ರಗಳ ಅಹಿಂಸೆಯೊಡನೆ ಸಂಯಮ ಮತ್ತು ತಪಸ್ಸಿಗೂ ಉತ್ಕೃಷ್ಟ ಧರ್ಮವೆಂದು ಮನ್ನಿಸಲಾಗಿದೆ. ಸಂಯಮವೆಂದರೆ ತನ್ನ ಮನಸ್ಸು ಮತ್ತು ಇಂದ್ರಿಯಗಳ ಮೇಲೆ ನಿಯಂತ್ರಣವಿರಿಸುವುದು; ಆದರೆ, ನಮ್ಮ ಮನಸ್ಸನ್ನು ದ್ವಂದ್ವದಲ್ಲಿ ಸಿಲುಕಿಸುವ, ನಮ್ಮ ಉದ್ದೇಶದಿಂದ ಚಲ-ವಿಚಲಗೊಳಿಸುವ ಮತ್ತು ನಮ್ಮ ಸಮತೂಕವನ್ನೇ ತಪ್ಪಿಸುವ ಅನೇಕ ಪ್ರಲೋಭನೆಗಳು ಈ ಪ್ರಪಂಚದಲ್ಲಿ ಅನುಭವಕ್ಕೆ ಬರುವುದುಂಟು. ತತ್ಪರಿಣಾಮವಾಗಿ ನಾವು ನಮ್ಮ ಮನೋಭಿಲಾಷೆ ಈಡೇರಿಸಿಕೊಳ್ಳಲು ಏನೆಲ್ಲ ಮಾಡಿ ಬಿಡುವುದುಂಟು. ಒಮ್ಮೆ ಕ್ರೋಧವಾದರೆ, ಮತ್ತೊಮ್ಮೆ ಮಾನ, ಮಗದೊಮ್ಮೆ ಮಾಯೆ, ಇನ್ನೊಮ್ಮೆ ಲೋಭಪರವಶರಾಗಿ ನಾವು ಇತರರ ಕಾಲೆಳೆದು ಕೆಡುಹುಲು ಪ್ರಯತ್ನಿಯುವುದುಂಟು; ಪರಸ್ಪರ ಸಹಿಷ್ಣುತೆ ಕಳೆದುಕೊಂಡು, ಸ್ವಾರ್ಥದ ಸೆರಗು ಹಿಡಿದು ಅಲ್ಲ-ಸಲ್ಲದ ಕೆಲಸಕ್ಕೆ ಕೈ ಹಾಕುವುದುಂಟು. ಅದರಿಂದಾಗಿ ಪರರಿಗೆ ಕೇಡುಂಟಾಗುತ್ತದೆ; ಸಮಾಜದಲ್ಲೊಂದು ಅನೀತಿಯ ವಾತಾವರಣ ಪಸರಿಸುತ್ತದೆ. ಈ ಮಾನಸಿಕ ಪ್ರವೃತ್ತಿಯೇ ಅಹಿಂಸೆಯ ಕೇಂದ್ರ ಬಿಂದು.

ಸಂಯಮದ ಹೊರತಾಗಿ ಅಹಿಂಸೆಯ ಪಾಲನೆಯಾಗಲಾರದು. ಸಂಯಮ ಸಾಧಿಸುವುದಕ್ಕೆ ತಪಸ್ಸುಬೇಕು; ತ್ಯಾಗಬೇಕು; ಅಪರಿಗ್ರಹವಂತೂ ಅಗತ್ಯಬೇಕು. ಭಗವಾನ ಮಹಾವೀರರ ತಪಸ್ಸಿನ ಉದ್ದೇಶ ಕೇವಲ ದೇಹ ದಂಡನೆಯಾಗಿರಲಿಲ್ಲ; ಲೌಕಿಕ ಯಶಸ್ಸು ಅಥವಾ ಕೀರ್ತಿ-ಸಂಪಾದನೆಗಾಗಿಯೂ ಅವರು ಈ ತಪೋಮಾರ್ಗವನ್ನು ಅನುಸರಿಸಿರಲಿಲ್ಲ. ಅವರ ಶಾರೀರಿಕ ಕಠೋರ ಸಾಧನೆಯ ಏಕಮಾತ್ರ ಉದ್ದೇಶವೆಂದರೆ-ತಮ್ಮ ಶರೀರವನ್ನು ಕೇವಲ ಸುಖವಿಲಾಸದ ಸಾಧನವಾಗಿರಿಸದೆ ಸಕಲ ಐಷಾರಾಮುಗಳನ್ನು ತ್ಯಾಗ ಮಾಡುವುದಾಗಿತ್ತು, ತಮ್ಮ ಮನಸ್ಸು ಮತ್ತು ಇಂದ್ರಿಯಗಳ ಮೇಲೆ ಹತೋಟಿಯಿಟ್ಟು ಮಾನಸಿಕ ಹಿಂಸೆಯಿಂದ ದೂರವಿರುವುದೇ ಅವರ ಮಾನಸಿಕ ಸಾಧನೆಯ ಮಹೋದ್ದೇಶವಾಗಿತ್ತು. ತಪಶ್ಚರ್ಯದ ಬಗೆಗೆ ದಿಗಂಬರ ಮತ್ತು ಶ್ವೇತಾಂಬರ ಪಂಥದ ಆಚಾರ್ಯರೆಲ್ಲರೂ ಒಕ್ಕೊರಲಿನಿಂದ ಸಾರಿ ಸಾರಿ ಹೇಳಿರುವುದುಂಟು : "ಕೇವಲ ನಗ್ನರಾಗಿರುವುದರಿಂದ ಅಥವಾ ಪಂಚಾಗ್ನಿಯಲ್ಲಿ ಬೇಯುವುದರಿಂದ ತಪಶ್ಚರ್ಯ ಮಾಡಿದಂತಾಗುವುದಿಲ್ಲ; ಜ್ಞಾನಪೂರ್ವಕ ಆಚರಣೆಯಿಂದ ನಿಜವಾದ ತಪಶ್ಚರ್ಯ ನಡೆಯುತ್ತದೆ."

## ಅಪರಿಗ್ರಹ

ಅಹಿಂಸಾತತ್ವವನ್ನು ಸಾಧ್ಯವಾದಷ್ಟೂ ವ್ಯಾವಹಾರಿಕಗೊಳಿಸುವ ದೃಷ್ಟಿಯಿಂದ ಅಪರಿಗ್ರಹದ ಅವಶ್ಯಕತೆಯನ್ನು ಎತ್ತಿ ತೋರಿಸಲಾಗಿದೆ. ಬರಿಯ ಬಟ್ಟೆಬರೆಗಳನ್ನು ಬಿಟ್ಟುಕೊಟ್ಟ ಮಾತ್ರಕ್ಕೆ ಅಪರಿಗ್ರಹವೆನಿಸುವುದಿಲ್ಲ; ಮಮತ್ವದ ತ್ಯಾಗ ಗೈದರೆ ಅಪರಿಗ್ರಹವೆನಿಸುತ್ತದೆ. ಯಾವುದೊಂದು ವಸ್ತುವನ್ನು ಅತ್ಯಂತ ಕಡಿಮೆ ಪ್ರಮಾಣದಲ್ಲಿ, ಅಥವಾ ಅತ್ಯಗತ್ಯವೆನಿಸುವಷ್ಟೇ ಪ್ರಮಾಣದಲ್ಲಿ ಗ್ರಹಣ ಮಾಡುವುದೂ ಅಪರಿಗ್ರಹವೆನಿಸುತ್ತದೆ. ಎಲ್ಲೆಲ್ಲಿ ಸಂಗ್ರಹ ಪ್ರವೃತ್ತಿಯುಂಟೋ ಅಲ್ಲಿ ಜಗಳದ ಬೀಜವಿದೆಯೆಂದೇ ಅರ್ಥ. ಹೆಚ್ಚು ಹೆಚ್ಚಿಗೆ ಆಸ್ತಿ-ಪಾಸ್ತಿಯ ಸಂಚಯವಾಗಬೇಕು, ತಾನೇ ಬಲಶಾಲಿಯೆನಿಸಿಕೊಳ್ಳಬೇಕು; ಸುಖಿಯಾಗಿರಬೇಕೆಂದೇ ಪ್ರತಿಯೊಬ್ಬರ ಬಯಕೆ. ಈ

ಬಯಕೆಯಲ್ಲಿಯೇ ಪರಸ್ಪರ ಬಡಿದಾಟ ಆರಂಭವಾಗುತ್ತದೆ. ಕಿತ್ತಾಟ-ಕಸಿದಾಟಗಳೂ ನಡೆಯುತ್ತವೆ; ಹಿಂಸೆಯ ಬೆಂಕಿ ಹೊತ್ತಿಕೊಳ್ಳುತ್ತದೆ. ಪೃಥ್ವಿಯ ಒಂದು ತುದಿಯಿಂದ ಮತ್ತೊಂದು ತುದಿಯವರೆಗೂ, ಸಮುದ್ರದ ಒಂದು ತೀರದಿಂದ ಇನ್ನೊಂದು ತೀರದ ವರೆಗೂ ದಿಗ್ವಿಜಯ-ಯಾತ್ರೆ ಕೈಕೊಂಡು ಸರ್ವಶ್ರೇಷ್ಠ ಸಾಮ್ರಾಟರೆನಿಸಿಕೊಳ್ಳಬೇಕೆಂಬ ರಾಜ-ಮಹಾರಾಜರ ಮಹತ್ವಾಕಾಂಕ್ಷೆಗಳಿಗೆ ಅಧಿಕಾರಲೋಲುಪತೆಗೆ ಏನರ್ಥ? ನಿಜ ಹೇಳುವುದಾದರೆ, ಮನುಷ್ಯನ ಪರಿಗ್ರಹ ಪ್ರವೃತ್ತಿಯ ಮೇಲೆ ಅಂಕುಶವೆಂಬುದಿಲ್ಲವಾದರೆ ಈ ಭೂಮಿಯ ಮೇಲೆ ಜನರು ಶಾಂತಿಪೂರ್ವಕವಾಗಿ ಬದುಕಿರುವುದೇ ಕಠಿಣವಾಗಿ ಬಿಡುತ್ತದೆ. ಬಾಯಬಲ್ ಗ್ರಂಥದಲ್ಲೊಂದು ಕಥಾಪ್ರಸಂಗವಿದೆ : ಏಸುಕ್ರಿಸ್ತನು ಒಬ್ಬ ಧನಿಕನಿಗೆ ಉಪದೇಶವೀಯುತ್ತ ಹೇಳಿದ - 'ನಿನಗೆ ನಿಜವಾದ ಜೀವನದಲ್ಲಿ ಪ್ರವೇಶ ಪಡೆಯುವುದಿದ್ದರೆ, ಹಿಂಸೆಯಾಚರಣೆ ಬಿಟ್ಟುಬಿಡು; ಪರಸ್ತ್ರೀಯ ಕಡೆಗೆ ಕಣ್ಣೆತ್ತಿ ನೋಡದಿರು; ಕಳವು ಮಾಡದಿರು; ಸುಳ್ಳಾಡದಿರು; ನಿನ್ನ ತಂದೆ-ತಾಯಿಗಳನ್ನು ಆದರದಿಂದ ನೋಡಿಕೋ; ಮತ್ತು ನಿನ್ನ ನೆರೆ-ಹೊರೆಯವರನ್ನು ಪ್ರೇಮಭಾವದಿಂದ ಕಾಣು.' ಏಸುವಿನ ಮಾತು ಕೇಳಿ ಕ್ಷಣ ಹೊತ್ತು ಮೌನದಿಂದಿದ್ದು ಆ ಧನಿಕನೆಂದ- 'ಪ್ರಭು ಈ ಮಾತುಗಳನ್ನೆಲ್ಲ ನಾನಂತೂ ಬಾಲ್ಯದಿಂದಲೇ ಆಚರಿಸುತ್ತ ಬಂದಿದ್ದೇನೆ.'

'ಹಾಗಿದ್ದರೆ, ಈ ಕೂಡಲೇ ಹೋಗಿ, ನಿನ್ನ ಆಸ್ತಿ-ಸಂಪತ್ತಿಯನ್ನೆಲ್ಲ ಮಾರಿ ಬಂದ ಹಣವನ್ನು ಬಡಬಗ್ಗರಲ್ಲಿ ಹಂಚಿಬಿಡು. ಆದರಿಂದ ನಿನಗೆ ದಿವ್ಯಜ್ಞಾನ ಪ್ರಾಪ್ತವಾದೀತು' ಎಂದ ಏಸುಕ್ರಿಸ್ತ.

ಆದರೆ ಇಂಥ ಧರ್ಮಾಚಾರ್ಯರ ಉಪದೇಶದ ಅಲ್ಪಾಂಶವನ್ನಾದರೂ ಸ್ವೀಕರಿಸಿ ಆಚರಣೆಯಲ್ಲಿ ತರುತ್ತಾರೆಯೇ ಜನ?

ಜೈನ ಸೂತ್ರಗಳಲ್ಲಿ ಅನೇಕ ಕಡೆಗಳಲ್ಲಿ ಅಂತರಂಗ ಶುದ್ಧಿಯ ಕುರಿತು ಒತ್ತಿ ಒತ್ತಿ ಹೇಳಲಾಗಿದೆ. ಬಹಿರಂಗ ಶುದ್ಧಿಯೆಂದರೆ ಅಂತರಂಗ ಶುದ್ಧಿಗೊಂದು ಸಾಧನವೆಂದೂ ಸ್ಪಷ್ಟಗೊಳಿಸಲಾಗಿದೆ. "ಯಾರಾದರೊಬ್ಬರು ನಗ್ನಾವಸ್ಥೆಯಲ್ಲಿದ್ದು ತಿಂಗಳುಗಟ್ಟಲೆ ಉಪವಾಸ ವ್ರತ ಕೈಕೊಂಡರೂ, ಅವರ ಅಂತರಂಗದೊಳಗಿನ ಮಾಯೆಯ ಜಾಲ ಹರಿಯುವ ವರೆಗೆ ಅವರಿಗೆಂದೂ ಸಿದ್ಧಿ ದೊರೆಯಲಾರದು" ಎಂದು ಸೂತ್ರಕೃತಾಂಗದಲ್ಲಿಯೂ, ಸಮಯಸಾರದಲ್ಲಿಯೂ ಉಲ್ಲೇಖಿಸಲಾಗಿದೆ. ಭಗವಾನ ಮಹಾವೀರರು ತಮ್ಮ ಶಿಷ್ಯರಿಗೆ ಹೇಳಿದರು : "ಎಲೈ ಶ್ರಮಣರೇ, ಮೊದಲು ಆತ್ಮಯುದ್ಧ ಮಾಡಿ ಜಯಶೀಲರಾಗಿರಿ, ಆತ್ಮಶುದ್ಧಿ ಸಾಧಿಸಿರಿ, ಬಾಹ್ಯಯುದ್ಧದಿಂದೇನೂ ಪ್ರಯೋಜನವಾಗಲಾರದು." ಅಷ್ಟೇ ಅಲ್ಲ "ಯಾವುದೊಂದು ವಸ್ತು ತಮ್ಮ ಕೈಗೆಟುಕದ ಹಾಗೆ ಕಂಡಾಗ ಆ ವಸ್ತುವಿನ ಬಗ್ಗೆ ಉಪೇಕ್ಷಿತರಾಗಿರುವುದು ತ್ಯಾಗವೆನಿಸುವುದಿಲ್ಲ. ಸುಂದರ ಮತ್ತು ಪ್ರಿಯವಾದ ಭೋಗವಸ್ತುಗಳನ್ನು ಹೊಂದಿದ್ದರೂ ಅವುಗಳ ಕಡೆಗೆ ಕಣ್ಣೆತ್ತಿ ನೋಡದಿರುವುದು ನಿಜವಾದ ತ್ಯಾಗವೆನಿಸುತ್ತದೆ." ಒಟ್ಟಿನಲ್ಲಿ ಹೇಳುವುದಾದರೆ- ಪರಿಗ್ರಹವೆಂಬುದು ಹಿಂಸೆಯ ಸಾಧನವಾಗಿದೆ; ಅಂತೆಯೇ ಅದು ತ್ಯಾಜ್ಯ.

**ಅನೇಕಾಂತವಾದ**

ಅಪರಿಗ್ರಹದಂತೆ ಅನೇಕಾಂತವಾದವೂ ಅಹಿಂಸೆಯ ಒಂದು ಉಪಸಿದ್ಧಾಂತವಾಗಿದೆ.

ಇದು ಅಹಿಂಸೆಯ ಬೌದ್ಧಿಕ ರೂಪ. ಅಹಿಂಸಕವೃತ್ತಿ ಅಥವಾ ಅಪ್ರಮಾದ ಭಾವವನ್ನು ಪಾಲಿಸಲು ಅಪರಿಗ್ರಹ ಅಥವಾ ಮಮತ್ವಬುದ್ಧಿಯ ತ್ಯಾಗ ಹೇಗೆ ಆವಶ್ಯಕವೋ ಹಾಗೆ ಅಹಿಂಸೆಗೆ ಸ್ಥಾಯೀಸ್ವರೂಪವೀಯುವುದಕ್ಕೆ ಅನೇಕಾಂತವಾದದ ಅಗತ್ಯವಿದೆ. ಜೀವನದ ವಸ್ತು-ವಿಷಯಗಳು ಜಟಿಲವಾಗಿವೆ; ಸಿಕ್ಕುಸಿಕ್ಕಾಗಿವೆ; ತಿಳಿಯಲು ಪ್ರಯತ್ನ ಮಾಡಿದಷ್ಟೂ ರಹಸ್ಯಗಳು ರಹಸ್ಯಗಳಾಗಿಯೇ ಉಳಿಯುತ್ತವೆ. ಈ ದೃಷ್ಟಿಕೋನದ ವಿವರಣೆಗೈಯುತ್ತ ಜೈನ ಆಗಮಗ್ರಂಥಗಳಲ್ಲಿ ಒಂದೇ ವಸ್ತುವಿಗೆ ದ್ರವ್ಯದ ದೃಷ್ಟಿಯಿಂದ ಒಂದೆಂದೂ, ಜ್ಞಾನ-ದರ್ಶನದ ದೃಷ್ಟಿಯಿಂದ ಹಲವೊಂದೆಂದೂ, ಇದ್ದದ್ದೆಂದೂ, ಇಲ್ಲದ್ದೆಂದೂ, ಅವಕ್ತವ್ಯರೂಪದ್ದೆಂದೂ ವರ್ಣಿಸಲಾಗಿದೆ. ಜಾಮಾಲಿಯ ಶಂಕಾ-ನಿರಸನ ಮಾಡುವ ಸಂದರ್ಭದಲ್ಲಿ ಭಗವಾನ ಮಹಾವೀರರು ಜೀವ ಮತ್ತು ಜಗತ್ತು ಒಂದು ದೃಷ್ಟಿಯಿಂದ ಶಾಶ್ವತ, ಮತ್ತೊಂದು ದೃಷ್ಟಿಯಿಂದ ಅಶಾಶ್ವತವೆಂದು ಪ್ರತಿಪಾದಿಸಿದ ಸಂಗತಿ ಭಗವತೀ ಸೂತ್ರದಲ್ಲಿ ಉಲ್ಲೇಖಗೊಂಡಿದೆ.

ಈ ವಿಶ್ವದ ಅನಂತ ರಹಸ್ಯಗಳ ಮತ್ತು ದಾರ್ಶನಿಕ ಸಿದ್ಧಾಂತಗಳ ಮಾತು ಹಾಗಿರಲಿ, ನಾವು ನಮ್ಮ ನಿತ್ಯ ಜೀವನದಲ್ಲಿ ಅನುಭವಿಸುವ ಸಣ್ಣ-ಪುಟ್ಟ ಸಂಗತಿಗಳನ್ನು ಯಥಾವತ್ತಾಗಿ ಅರ್ಥ ಮಾಡಿಕೊಳ್ಳುವುದು ಕಠಿಣವೆನಿಸುತ್ತದೆ. ನಮ್ಮ ದಿನನಿತ್ಯದ ಜೀವನದಲ್ಲಿ ಅದೆಷ್ಟೋ ಸಲ ನಮ್ಮ ಮನಸ್ಸಿನಲ್ಲಿ ನೆಲೆನಿಂತ ಪೂರ್ವಗ್ರಹಿಕೆಗಳಿಂದಾಗಿ, ನಮಗೆ ತಿಳಿದೋ ತಿಳಿಯದೆಯೋ ಪುಟಿದೇಳುವ ರಾಗ-ದ್ವೇಷಗಳಿಂದಾಗಿ ನಾವು ನಮ್ಮ ಪ್ರತಿಪಕ್ಷದ ಪ್ರತಿಪಾದನೆಯನ್ನು ತಿಳಿದುಕೊಳ್ಳಲು ಅಸಮರ್ಥರಾಗುತ್ತೇವೆ; ಒಮ್ಮೊಮ್ಮೆ ಅವರ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳುವುದಕ್ಕೂ ನಿರಾಕರಿಸುತ್ತೇವೆ. ಇಂಥ ಸಂದರ್ಭಗಳಲ್ಲಿ ನಮ್ಮ ಮನಸ್ಸಿನಲ್ಲಿ ಹೆಪ್ಪುಗಟ್ಟಿ ನಿಂತಿರುವ ಪೂರ್ವ ನಿಶ್ಚಿತ ಧೋರಣೆಗಳೇ ಸರಿಯೆಂದು ಮಂಡಿಸುವ ಅಥವಾ ಪ್ರತಿಪಕ್ಷವನ್ನು ಖಂಡಿಸುವ ಪ್ರಯತ್ನ ಮಾಡುತ್ತೇವೆ; ನಮ್ಮ ಪ್ರತಿಪಕ್ಷದ ಹೇಳಿಕೆಯಲ್ಲೂ ಸತ್ಯಾಂಶವಿರಬಹುದೆಂಬ ಸತ್ಯವನ್ನು ನಾವು ಮರೆತಿರುತ್ತೇವೆ. ಈ ಏಕಾಂಗೀ ಮನೋವೃತ್ತಿಯ ಪರಿಣಾಮವೆಂದರೆ ಕ್ರೋಧ, ಅಂಧಾನುಕರಣ ಮತ್ತು ಸಂಘರ್ಷ. ಇವೆಲ್ಲ ಹಿಂಸೆಯ ವಿವಿಧ ರೂಪಗಳೇ. ಈ ತಥ್ಯಾಂಶವನ್ನು ತಿಳಿಸುವುದೇ ಅನೇಕಾಂತವಾದದ ವಿವರಣೆಯ ಉದ್ದೇಶ. ಅನೇಕಾಂತ ವಾದವೆಂದರೆ ಏಕಾಂತ ದೃಷ್ಟಿಯ ತ್ಯಾಗ, ಬೌದ್ಧಿಕ ಸಹಿಷ್ಣುತೆ, ಮಾನಸಿಕ ಅಹಿಂಸೆ. ತಾತ್ಪರ್ಯವೆಂದರೆ ಅಹಿಂಸಕ ಅಥವಾ ಅಪ್ರಮತ್ತ ಭಾವನೆಯಿಂದ ವರ್ತಿಸಿದರೆ ಸಾಲದು, ಈ ಭಾವನೆಯ ಜೊತೆಗೆ ಬುದ್ಧಿಯ ಬೆಸುಗೆ ಹಾಕಬೇಕು; ಸಮಚಿತ್ತ ಸಾಧಿಸಬೇಕು. ಈ ಮನೋವೃತ್ತಿಯನ್ನು ಸಂಪಾದಿಸಲು ನಾವು ಸಮಾಧಾನಿಗಳಾಗಿ, ಸಮಚಿತ್ತರಾಗಿ ಆಲೋಚಿಸುವುದು ಅಗತ್ಯವಾಗಿದೆ. ಅಂದರೇನೇ ನಾವು ದುರಾಗ್ರಹದಿಂದ ದೂರವಿದ್ದು, ನಿಷ್ಪಕ್ಷ ಭಾವದಿಂದ ಇತರರ ದೃಷ್ಟಿಕೋನವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದು; ಪೂರ್ವಾಪರ ಸಂಬಂಧಗಳನ್ನು ತೂಗಿ ನೋಡಿ ಅಪೇಕ್ಷಿತ ತೀರ್ಮಾನಕ್ಕೆ ತಲುಪಬಹುದು. ಆದುದರಿಂದ ಅನೇಕಾಂತವಾದಿಯಾದವನು ಸಹಿಷ್ಣುತೆಯುಳ್ಳವನಾಗಿರಬೇಕು; ತನ್ನ ರಾಗ-ದ್ವೇಷಗಳನ್ನು ಹತೋಟಿಯಲ್ಲಿಟ್ಟು ಕೊಳ್ಳಬಲ್ಲ ವೀತರಾಗನಾಗಬೇಕು; ಹೀಗಾದಾಗಲೇ ಆತ ಇನ್ನೊಬ್ಬರ ಹೇಳಿಕೆಯನ್ನೂ ವಿರೋಧೀ ದರ್ಶನದ ವಿವರಣೆಯನ್ನೂ ಬಿಚ್ಚು ಮನಸ್ಸಿನಿಂದ ತಿಳಿದುಕೊಂಡು ಮಧ್ಯಸ್ಥ ಭಾವನೆಯಿಂದ ವಿರೋಧೀ ವಿಚಾರಗಳ ಸಮನ್ವಯ ಸಾಧಿಸುವಲ್ಲಿ ಸಫಲನಾಗುತ್ತಾನೆ. ಈ ಮಧ್ಯಸ್ಥ ಭಾವವೆಂದರೆ ಸಮಸ್ತ ಶಾಸ್ತ್ರಗಳ ರಹಸ್ಯ ಅಥವಾ ತಿರುಳು

ಎನ್ನಲಾಗಿದೆ. ಈ ಮಧ್ಯಸ್ಥ ಭಾವವಿಲ್ಲದೆ ಬಂಡಿಗಟ್ಟಲೆ ಶಾಸ್ತ್ರ ಓದಿದರೂ ಗಿಂಡಿಯಷ್ಟೂ ತಿರುಳು ದೊರೆಯದು. ಪೂರ್ಣ ಸತ್ಯವೆಂಬುದು ವರ್ಣನಾತೀತವಾಗಿದೆ; ವಿವರಣಾತೀತವಾಗಿದೆ. ವಿಧವಿಧದ ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವಗಳ ದೃಷ್ಟಿಯಿಂದ ಪ್ರತಿಯೊಬ್ಬ ವ್ಯಕ್ತಿ ತನ್ನ ರುಚಿ-ಅಭಿರುಚಿಗಳಿಗೆ ತಕ್ಕಂತೆ ಸತ್ಯದ ಮನವರಿಕೆ ಮಾಡಿಕೊಳ್ಳಲೆತ್ನಿಸುತ್ತಾನೆ. ಹೀಗೆ ಅನೇಕಾಂತವಾದವೆಂದರೆ ಅಹಿಂಸೆಯ ಪೂರಕ ತತ್ವವೆನಿಸಿದೆ.

## ಕರ್ಮ ಸಿದ್ಧಾಂತ

ಕರ್ಮಸಿದ್ಧಾಂತವೂ ಅಹಿಂಸಾ ತತ್ವದ ಮಹತ್ವಪೂರ್ಣ ಅಂಗವಾಗಿದೆ. ಈ ಸಿದ್ಧಾಂತವು ನಮಗೆ ಸ್ವಾವಲಂಬನವನ್ನು ಕಲಿಸುತ್ತದೆ. 'ಹೇಗೆ ಮಾಡುವಿರೋ ಹಾಗೆ ಪಡೆಯುವಿರಿ, ಬಿತ್ತಿದಂತೆ ಬೆಳೆ, ಸತ್ಕಾರ್ಯಕ್ಕೆ ತಕ್ಕ ಸತ್ಫಲ, ದುಷ್ಕಾರ್ಯಕ್ಕೆ ಕಹಿ ಫಲ, ಎಂಥ ಪರಿಸ್ಥಿತಿಯಲ್ಲೂ ಕರ್ಮದಿಂದ ಮುಕ್ತಿಯೆಂಬುದಿಲ್ಲ' ಎಂಬುದೇ ಕರ್ಮಸಿದ್ಧಾಂತಗಳ ಸಾರಾಂಶ. ನಮ್ಮ ಮನಸ್ಸಿನಲ್ಲಿ ಒಳ್ಳೆಯದಾಗಲೀ, ಕೆಟ್ಟದ್ದಾಗಲೀ ವಿಚಾರ ಬಂದಾಗ ಮನದೊಳಗೇ ಮೊದಲು ಕ್ರಿಯಾಸಂಚಾರ ಆರಂಭವಾಗುತ್ತದೆ; ಆಗ ಜಡ ಕರ್ಮವು ಆತ್ಮಚೇತನದೊಡನೆ ಕೂಡಿಕೊಳ್ಳುತ್ತದೆ-ಎಣ್ಣೆ ಹತ್ತಿದ ಶರೀರಕ್ಕೆ ಧೂಳಿಯ ಕಣಗಳು ಬಂದು ಅಂಟಿಕೊಂಡಂತೆ! ಈ ಕರ್ಮಬಂಧನಕ್ಕೆ ತಡೆ ಹಾಕುವುದಗತ್ಯವಾಗಿದೆ. ಸಂಯಮ, ತಪ, ತ್ಯಾಗ ಮತ್ತು ಆತ್ಮದ ಮನದಿಂದ ಈ ಕರ್ಮಬಂಧನವನ್ನು ತಡೆಗಟ್ಟಬಹುದು. ಮೊದಲು ಕರ್ಮದ ಮೇಲೆ ನಿಯಂತ್ರಣ ಹಾಕಿದ ಬಳಿಕ ನಾವು ಆತ್ಮಶುದ್ಧಿಯ ಸಾಧನೆಯಲ್ಲಿ ಮುಂದುವರಿದಂತೆ ಕ್ರಮೇಣ ಕರ್ಮನಾಶವಾಗುವುದು; ಹಾಗೆ ಸಮಸ್ತ ಕರ್ಮಗಳು ನಾಶವಾದನಂತರ ಪರಮಪದ ಪ್ರಾಪ್ತವಾಗುತ್ತದೆ. ಪ್ರಪಂಚದ ಪರದಾಟ ಮುಗಿದಂತಾಗಿ, ಜನನ-ಮರಣಗಳ ಜಂಜಾಟದಿಂದ ಬಿಡುಗಡೆ ದೊರೆಯುತ್ತದೆ; ಹೀಗಾಗಿ, ಆತ್ಮವು ಪರಮಾತ್ಮವಾಗಿ, ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತವೀರ್ಯದ ಅನುಭವವನ್ನು ಪಡೆಯುತ್ತದೆ.

ಮನುಷ್ಯನು ತನ್ನ ಕರ್ಮಬಲದಿಂದ, ಪುರುಷಾರ್ಥದಿಂದ ಏನೆಲ್ಲ ಮಾಡಬಲ್ಲನೆಂದೂ ಉನ್ನತೋನ್ನತ ಪದಕ್ಕೇರಬಲ್ಲನೆಂದೂ ತಿಳಿಸುತ್ತ ಭಗವಾನ ಮಹಾವೀರರು ಕರ್ಮದ ಮಹತ್ವವನ್ನು ವಿವರಿಸಿದರು. ತಮ್ಮ ಭಾಗ್ಯ ವಿಧಾನದ ಪರೀಕ್ಷೆಗಾಗಿ ಬಾಹ್ಯ ದೈವೀಶಕ್ತಿಯ ಮೇಲೆ ಅವಲಂಬಿಸಿಕೊಂಡಿರುವುದೇನೂ ಅಗತ್ಯವಿಲ್ಲ. ಸರ್ವವ್ಯಾಪಿಯಾದ, ಸರ್ವಸ್ವತಂತ್ರನಾದ, ನಿತ್ಯವೆನಿಸುವ ಈಶ್ವರೀಶಕ್ತಿಗೆ ಜೈನ ಧರ್ಮದಲ್ಲಿ ಪ್ರವೇಶವಿಲ್ಲ. ಈ ವಿಶ್ವವನ್ನು ಸೃಷ್ಟಿಸಿರಬಹುದಾದ ಮತ್ತು ನಮ್ಮ ಶುಭ-ಅಶುಭ ಕರ್ಮಗಳಿಗೆ ಫಲಗಳನ್ನೀಯಬಹುದಾದ ಈಶ್ವರೀ ಶಕ್ತಿಯೆಂಬುದಿಲ್ಲ. ಯಾವಾಗ ಮನುಷ್ಯನೇ ಸ್ವತಃ ಮಿಥ್ಯತ್ವ ಅವಿರತಿ, ಪ್ರಮಾದ, ಕಷಾಯ ಮತ್ತು ಯೋಗಗಳಿಂದ ವಿಮುಕ್ತನಾಗಿ ಕರ್ಮಗಳನ್ನು ನಾಶಗೊಳಿಸುತ್ತಾನೋ ಆಗ ಆತ ಆತ್ಮವಿಕಾಸದ ಪರಮೋನ್ನತ ಸ್ಥಿತಿ-ಈಶ್ವರಿಯ ಸ್ಥಾನ-ಪಡೆದುಕೊಳ್ಳಬಲ್ಲ; ಹೀಗೆ ಕರ್ಮಸಿದ್ಧಾಂತವು ನಮ್ಮನ್ನು ಪರಾವಲಂಬನ ಪ್ರವೃತ್ತಿಯಿಂದ ದೂರವಿರಿಸಿ ಪುರುಷಾರ್ಥಿಗಳಾಗಲು ಸ್ವಾವಲಂಬಿಗಳಾಗಲು ಪ್ರೇರಣೆ ನೀಡುತ್ತದೆ.

## ಕರ್ಮದ ಮಹತ್ವ

ಕರ್ಮದ ಮಹತ್ವವನ್ನು ಒಪ್ಪಿಕೊಂಡರೆ ಜನ್ಮ ಅಥವಾ ಜಾತಿಯ ಮಹತ್ವ ತಾನೇ ನಿರರ್ಥಕವೆನಿಸಿ ಬಿಡುತ್ತದೆ. ಸಮ್ಯಗ್ ದರ್ಶನವುಳ್ಳ ಚಾಂಡಾಲ ಪುರುಷನೂ ವಂದನೀಯನಾಗಬಲ್ಲ. ಮಹಾವೀರರ ಉಪದೇಶದಲ್ಲಿ ಕರ್ಮಕ್ಕೆ ಪ್ರಾಧಾನ್ಯವಿದೆಯಲ್ಲದೆ, ಜಾತಿಗಲ್ಲ. ರಾಜಾ ಶ್ರೇಣಿಕನು ಸ್ವತಃ ಎತ್ತರವಾದ ಆಸನದ ಮೇಲೆ ಕುಳಿತು ಒಬ್ಬ ಚಾಂಡಾಲನಿಂದ ವಿದ್ಯೆ ಪಡೆಯಲಪೇಕ್ಷಿಸಿದ ಮಾತ್ರಕ್ಕೆ ಅವನಿಗೆ ಆ ವಿದ್ಯೆ ಬರಲಿಲ್ಲ. ಆ ಚಾಂಡಾಲನಿಗೂ ತನ್ನಂಥ ಆಸನವಿತ್ತು ಆ ಆಸನದೊಡನೆ ಹೊಂದಿಕೊಂಡು ಕುಳಿತಾಗ ಅವನಿಗೆ ಅಪೇಕ್ಷಿತ ವಿದ್ಯಾಸಿದ್ಧಿ ಪ್ರಾಪ್ತವಾಯಿತು. ಜಯಘೋಷಮುನಿ ಒಮ್ಮೆ ವಿಜಯಘೋಷ ಬ್ರಾಹ್ಮಣನ ಯಜ್ಞಶಾಲೆಯಲ್ಲಿ ಭಿಕ್ಷೆಗಾಗಿ ಬಂದ. ತನ್ನ ಯಜ್ಞ ಶಾಲೆಯಲ್ಲಿ ವೇದಪಾಠಿಗಳಾದ ಬ್ರಾಹ್ಮಣರಿಗೆ ಮಾತ್ರವೇ ಭಿಕ್ಷೆ ದೊರೆಯುತ್ತದೆಂದು ವಿಜಯಘೋಷ ಹೇಳಿದಾಗ ಜಯಘೋಷಮುನಿಯು ನೀಡಿದ ಉಪದೇಶ ವಿಚಾರಣೀಯವಾಗಿದೆ : "ಯಾವನು ರಾಗ, ದ್ವೇಷ ಮತ್ತು ಭಯಗಳ ಮೇಲೆ ವಿಜಯ ಸಂಪಾದಿಸಿದ್ದಾನೋ, ಯಾವನು ಸದಾಚಾರಿ, ತಪಸ್ವಿ ಮತ್ತು ಜಿತೇಂದ್ರಿಯನಾಗಿದ್ದಾನೋ, ಯಾವನು ಹಿಂಸೆಯಿಂದ, ಅಸತ್ಯ ಮಾತುಗಳಿಂದ, ಪರರ ವಸ್ತು ಒಡವೆಗಳಿಂದ, ಕಾಮ-ಭೋಗ-ಲಾಲಸೆಗಳಿಂದ ದೂರವಿದ್ದಾನೋ ಅವನೇ ನಿಜವಾದ ಬ್ರಾಹ್ಮಣ. ತಲೆ ಬೋಳಿಸಿಕೊಂಡವರೆಲ್ಲ ಶ್ರಮಣರಲ್ಲ; ಓಂಕಾರ ಜಪಿಸುವವರೆಲ್ಲ ಬ್ರಾಹ್ಮಣರಲ್ಲ; ಅರಣ್ಯದಲ್ಲಿ ವಾಸವಾಗಿದ್ದವರೆಲ್ಲ ಮುನಿಗಳಲ್ಲ; ನಾರುಡುಗೆ ಧರಿಸಿದವರೆಲ್ಲ ತಪಸ್ವಿಗಳಲ್ಲ. ಸಮತಾಭಾವದಿಂದ ಶ್ರಮಣ, ಬ್ರಹ್ಮಚರ್ಯ ಪಾಲನೆಯಿಂದ ಬ್ರಾಹ್ಮಣ, ಜ್ಞಾನದಿಂದ ಮುನಿ, ತಪದಾಚರಣೆಯಿಂದ ತಪಸ್ವಿಯೆನಿಸಿಕೊಳ್ಳುತ್ತಾರೆ. ಮನುಷ್ಯನು ತನ್ನ ಕರ್ಮದಿಂದ ಬ್ರಾಹ್ಮಣ, ತನ್ನ ಕರ್ಮದಿಂದ ಕ್ಷತ್ರಿಯ, ತನ್ನ ಕರ್ಮದಿಂದ ವೈಶ್ಯ ಮತ್ತು ತನ್ನ ಕರ್ಮದಿಂದಲೇ ಶೂದ್ರನೂ ಅನ್ನಿಸಿಕೊಳ್ಳುತ್ತಾನೆ." ಈ ಪ್ರಸಂಗವಾದ ನಂತರ ವೈದಿಕ ಯಜ್ಞಗಳಿಗೆ ಸಂಯಮ ಮತ್ತು ತಪಸ್ಸುಗಳನ್ನೂ ಸೇರಿಸಿ ಅವುಗಳ ಪರಿಭಾಷೆಯನ್ನೇ ಬದಲಿಸಿಬಿಡಲಾಯಿತು. ವೇದಾನುಯಾಯಿಗಳಾದ ಬ್ರಾಹ್ಮಣರನ್ನು ಗಮನದಲ್ಲಿರಿಸಿ ಹೀಗೆ ಹೇಳಲಾಯಿತು : "ಎಲೈ ಯಜ್ಞಗೈಯ್ಯುವ ಬ್ರಾಹ್ಮಣರೇ, ನೀವು ಸುಮ್ಮಸುಮ್ಮನೇ ಜಲವೆಂದರೆ ಶುದ್ಧವೆಂದು ಭಾವಿಸಿ ತೃಣ, ಕಾಷ್ಠ ಮತ್ತು ಅಗ್ನಿಗಳನ್ನು ಉಪಯೋಗಿಸಿ ಮತ್ತು ಬೆಳಗು ಬೈಗುಗಳಲ್ಲಿ ಶರೀರವನ್ನು ಶುದ್ಧಗೊಳಿಸಿಕೊಂಡಂತೆ ಮಾಡಿ ಅಜ್ಞಾನದಿಂದಾಗಿ ಯಜ್ಞಪಶುಗಳ ಬಲಿಯನ್ನೇಕೆ ತೆಗೆದುಕೊಳ್ಳುತ್ತಿದ್ದೀರಿ? ಇದರಿಂದ ನಿಮ್ಮ ಪಾಪವೆಂಬುದು ಹೆಚ್ಚಾಗುತ್ತದೆಯಲ್ಲದೆ, ಕಡಿಮೆಯಾಗುವುದಿಲ್ಲ." "ನಿಜವಾದ ಯಜ್ಞವೆಂದರೆ ಇಂದ್ರಿಯನಿಗ್ರಹ. ತಪವೆಂದರೆ ಆ ಯಜ್ಞದ ಅಗ್ನಿ. ಜೀವವೆಂಬುದು ಆ ಅಗ್ನಿಯ ಸ್ಥಾನ. ಮನ, ವಚನ ಮತ್ತು ಕಾಯಗಳು ಅದರ ಅಭಿವ್ಯಕ್ತಿ ಮಾಧ್ಯಮಗಳು. ಶರೀರವು ಅಗ್ನಿ ಪ್ರಜ್ವಲಿಸುವಂತೆ ಮಾಡುವ ಸಾಧನ. ಕರ್ಮವೇ ಇಂಧನ. ಸಂಯಮವೇ ಶಾಂತಿಮಂತ್ರ. ಜಿತೇಂದ್ರಿಯ ಪುರುಷರು ಧರ್ಮದ ಜಲಾಶಯದಲ್ಲಿ ಮಿಂದು, ಬ್ರಹ್ಮಚರ್ಯ ರೂಪೀ ಶಾಂತಿತೀರ್ಥದಿಂದ ಪುನೀತರಾಗಿ ಶಾಂತಿಯಜ್ಞ ಮಾಡುತ್ತಾರೆ. ಇದುವೇ ಯಜ್ಞ. ಇದುವೇ ಧರ್ಮ."

# ಜೈನ ಸಂಸ್ಕೃತಿಯ ಕಾಣಿಕೆ

ಭಾರತದಲ್ಲಿ ಜೈನರ ಸಂಖ್ಯೆಯೇನೂ ಹೆಚ್ಚಿಗಿಲ್ಲ. 1971ರ ಜನಗಣನೆಯ ಪ್ರಕಾರ ಒಟ್ಟು 26 ಲಕ್ಷ ಜೈನ ಧರ್ಮಾನುಯಾಯಿಗಳು ದೇಶದಲ್ಲಿದ್ದು ದೇಶದ ಇಡಿಯ ಜನಸಂಖ್ಯೆಯೊಡನೆ ಹೋಲಿಸಿದರೆ ಜೈನರು ಅರ್ಧ ಶತಾಂಶಕ್ಕಿಂತಲೂ ಕಡಿಮೆ ಪ್ರಮಾಣದಲ್ಲಿದ್ದಾರೆ. ಜೈನರು ದಿಗಂಬರ, ಶ್ವೇತಾಂಬರ, ಸ್ಥಾನಕವಾಸಿ ಮತ್ತು ತೇರಾಪಂಥ-ಹೀಗೆ ನಾಲ್ಕು ಘಟಕಗಳಲ್ಲಿ ವಿಭಾಗಿಸಲ್ಪಟ್ಟಿದ್ದಾರೆ. ದಕ್ಷಿಣ, ಉತ್ತರ ಮತ್ತು ಮಧ್ಯ ಭಾರತದಲ್ಲಿ ಹೆಚ್ಚಾಗಿ ದಿಗಂಬರ ಪಂಥದವರೂ, ಗುಜರಾತ, ರಾಜಸ್ಥಾನ, ಮಧ್ಯಭಾರತ, ಪಂಜಾಬ್, ಹರಿಯಾಣಗಳಲ್ಲಿ ಹೆಚ್ಚಾಗಿ ಶ್ವೇತಾಂಬರರೂ ನೆಲೆಗೊಂಡಿದ್ದಾರೆ. ಅನೇಕ ಜೈನರು ವ್ಯಾಪಾರ ಉದ್ದಿಮೆಗಳಲ್ಲಿ ತೊಡಗಿದವರಾಗಿದ್ದಾರೆ. ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿರುವ ಕೆಲವು ಜೈನರು ಬೇಸಾಯದಲ್ಲಿಯೂ ನಿರತರಾಗಿದ್ದಾರೆ. ವ್ಯಾಪಾರೋದ್ದಿಮೆಗಳಲ್ಲಿದ್ದವರು ಸ್ವಾಭಾವಿಕವಾಗಿಯೇ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ವರ್ಚಸ್ಸುಳ್ಳವರಾಗಿದ್ದಾರೆ. ತಮ್ಮ ಔದಾರ್ಯ ಮತ್ತು ದಾನ ಗುಣಗಳಿಗಾಗಿಯೂ ಅನೇಕರು ಪ್ರಖ್ಯಾತರಾಗಿದ್ದಾರೆ. ಅವರು ಸ್ಥಾಪಿಸಿದ ಅನೇಕ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ಆಶ್ರಮಗಳಲ್ಲಿ ಉಚಿತ ಶಿಕ್ಷಣವೀಯಲಾಗುತ್ತಿದೆ; ಆಸ್ಪತ್ರೆಗಳಲ್ಲಿ ಉಚಿತ ಉಪಚಾರ ನೀಡಲಾಗುತ್ತಿದೆ. ಹಿಂದಿನ ಕಾಲದಿಂದಲೂ ಜೈನರು ದೇಶದ ಆಡಳಿತದೊಡನೆ ಸಂಪರ್ಕವಿರಿಸಿಕೊಂಡು ಬಂದವರಾಗಿದ್ದಾರೆ. ಹಿಂದು ಮತ್ತು ಮುಸಲ್ಮಾನ ಅರಸರಾಳಿಕೆಗಳಲ್ಲಿ ಅವರು ರಾಜಮಂತ್ರಿ ಸೇನಾಪತಿ, ಕೋಶಾಧ್ಯಕ್ಷ, ವ್ಯಾಪಾರಸ್ಥ, ರತ್ನಪರೀಕ್ಷಕ, ರಾಜದೂತ ಮುಂತಾದ ಸ್ಥಾನಗಳನ್ನು ಭೂಷಿಸಿದವರಾಗಿದ್ದಾರೆ. ಅಕಬರ ಬಾದಶಹನು 'ವಿಜಯಸೂರಿ'ಗೆ 'ಧರ್ಮಗುರು' ಎಂಬ ಅಭಿಧಾನ ನೀಡಿ ಸನ್ಮಾನಿಸಿ ಅವರ ಉಪದೇಶದಂತೆ ಪರ್ಯೂಷಣಪರ್ವ (ದಶಲಾಕ್ಷಣಿ) ಕಾಲದಲ್ಲಿ ತನ್ನ ರಾಜ್ಯದಲ್ಲಾದರೂ ಹಿಂಸೆಯೆಸಗಬಾರದೆಂದು ರಾಜಾಜ್ಞೆ ಹೊರಡಿಸಿದ್ದನು. ರಾಜಸ್ಥಾನದಲ್ಲಿ ಮೊಗಲ ಸೈನ್ಯಕ್ಕೆ ಸಿಂಹಸ್ವಪ್ನವಾಗಿದ್ದ ಮಹಾರಾಣಾ ಪ್ರತಾಪನ ಆಡಳಿತಾವಧಿಯಲ್ಲಿದ್ದ ಸುವಿಖ್ಯಾತ ಜೈನ ಭಾಮಾಶಾಹನು ತನ್ನ ಸರ್ವಸ್ವವನ್ನೂ ಸಮರ್ಪಿಸಲು ಸಿದ್ಧನಾಗಿ ತನ್ನ ರಾಷ್ಟ್ರಭಕ್ತಿಯನ್ನು ಪ್ರಕಟಪಡಿಸಿದ ಸಂಗತಿ ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ.

**ಲೌಕಿಕ ಸಾಹಿತ್ಯದ ರಚನೆ**

ಧರ್ಮ, ಸಾಹಿತ್ಯ ಮತ್ತು ನ್ಯಾಯ-ನೀತಿಗಳ ಪ್ರಚಾರ ಮತ್ತು ಪ್ರಸಾರ ಕಾರ್ಯಗಳಲ್ಲಿ ಜೈನ ಶ್ರಮಣರ ಪಾತ್ರ ಸಣ್ಣದೇನಲ್ಲ. ಧರ್ಮ ಪ್ರಚಾರಕ್ಕಾಗಿ ಗ್ರಾಮದಿಂದ ಗ್ರಾಮಕ್ಕೆ ವಿಹಾರಗೈಯುತ್ತಿದ್ದ ಜೈನ ಶ್ರಮಣರ ಸ್ವಾಧ್ಯಾಯ, ಪಠಣ-ಪಾಠಣೆಗಳೆಲ್ಲ ನಿರಂತರವಾಗಿ ನಡೆದಿರುತ್ತಿದ್ದವು.

ತಮ್ಮದೊಂದು ಕ್ಷಣವನ್ನೂ ಅವರು ವ್ಯರ್ಥ ಕಳೆಯುತ್ತಿರಲಿಲ್ಲ. ಧಾರ್ಮಿಕ ಮತ್ತು ಲೌಕಿಕ ವಿಷಯಗಳ ಮೇಲೆ ಅವರು ನೂರಾರು ಗ್ರಂಥಗಳನ್ನು ರಚಿಸಿ ಈ ಶ್ರಮಣರು ಸಾಹಿತ್ಯ ಭಂಡಾರವನ್ನು ತುಂಬಿಸಿದರು. ಇದರ ಮೇಲಿಂದಲೇ ಅವರ ಅಧ್ಯಯನಶೀಲತೆ ಮತ್ತು ಅಧ್ಯಯವಸಾಯೀ ಪ್ರವೃತ್ತಿಯ ಕಲ್ಪನೆ ಬರಬಹುದಾಗಿದೆ. ಕಾವ್ಯ, ಕೋಶ, ವ್ಯಾಕರಣ, ಅಲಂಕಾರ, ಛಂದಶಾಸ್ತ್ರಗಳಲ್ಲದೆ ಈ ಆದರಣೀಯ ಮಹಾಪುರುಷರು ಅರ್ಥಶಾಸ್ತ್ರ, ವೈದ್ಯಕೀಯಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಹಸ್ತರೇಖಾಶಾಸ್ತ್ರ, ಮಂತ್ರ-ತಂತ್ರ, ರತ್ನಪರೀಕ್ಷೆ, ಪಾಕಶಾಸ್ತ್ರ ಇತ್ಯಾದಿ ಅನೇಕ ಉಪಯುಕ್ತ ಲೌಕಿಕ ವಿಷಯಗಳಲ್ಲೂ ತಮ್ಮ ವಿದ್ವತ್ಪೂರ್ಣ ಲೇಖನಿಯಾಡಿಸಿ ಸಾಹಿತ್ಯದ ಶ್ರೀಮಂತಿಕೆ ಹೆಚ್ಚಿಸಿದ್ದಾರೆ.

## ಕಥಾಸಾಹಿತ್ಯ ಸೃಷ್ಟಿ

ಕಥಾಸಾಹಿತ್ಯ ಕ್ಷೇತ್ರದಲ್ಲಿ ಜೈನ ಶ್ರಮಣರು ತಮ್ಮ ವಿಲಕ್ಷಣ ಪ್ರತಿಭೆಯ ಪರಿಚಯ ಮಾಡಿಕೊಟ್ಟಿದ್ದಾರೆ. ತಮ್ಮದೊಂದು ವಿಚಾರವನ್ನು ಉದಾಹರಣೆ ಮತ್ತು ದೃಷ್ಟಾಂತಗಳ ಮೂಲಕ ಧಾರ್ಮಿಕ ಕಥೆಯ ರೂಪದಲ್ಲಿ ಸಾದರ ಪಡಿಸುವ ಪರಂಪರೆ ಭಗವಾನ ಮಹಾವೀರರ ಕಾಲದಿಂದಲೂ ನಡೆದುಬಂದುದಾಗಿದೆ. ಜೈನ ಶ್ರಮಣರು ತಮ್ಮ ಉಪದೇಶ ಸರಳ, ಸುಗಮ ಮತ್ತು ಲೋಕಪ್ರಿಯವಾಗಬೇಕೆಂಬ ಉದ್ದೇಶದಿಂದ ಕಥೆ-ವರ್ಣನೆಗಳನ್ನು ಬಳಸುತ್ತಿದ್ದರು. ವೈದ್ಯರು ಸಕ್ಕರೆಯ ಲೇಪದಲ್ಲಿಟ್ಟ ಕಹಿ ಮದ್ದನ್ನಿತ್ತು ರೋಗ ನಿವಾರಣೆ ಮಾಡುವಂತೆಯೇ ಅನೇಕ ಸಲ ಈ ಶ್ರಮಣರು ಲೋಕ ರುಚಿಗಾಗಿ ಶೃಂಗಾರ-ಅಲಂಕಾರಗಳುಳ್ಳ ಕಥಾಲೇಪನದಲ್ಲಿಟ್ಟು ತಮ್ಮ ತತ್ವಗಳನ್ನು ಪ್ರತಿಪಾದಿಸುತ್ತಿದ್ದರು. ಈ ದೃಷ್ಟಿಯಿಂದ ಜೈನ ಆಚಾರ್ಯರು ಅನೇಕಾನೇಕ ಲೋಕಪ್ರಿಯ ಕಥಾಗ್ರಂಥಗಳನ್ನೂ ಕಥಾಕೋಶಗಳನ್ನೂ ರಚನೆಮಾಡಿದ್ದು ಆ ಗ್ರಂಥಗಳು ಸಾಮಯಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಬಗ್ಗೆ ಅಧ್ಯಯನ ನಡೆಸಲು ಬಹಳೇ ಉಪಯುಕ್ತವೆನಿಸುತ್ತವೆ.

'ಜ್ಞಾತಾಧರ್ಮಕಥಾ'ದಲ್ಲಿ ಜ್ಞಾತಪುತ್ರ ಮಹಾವೀರರ ಧರ್ಮಕಥೆಗಳನ್ನು ಬಹಳೇ ಬೋಧಪ್ರದ ಮತ್ತು ಆಕರ್ಷಕ ಶೈಲಿಯಲ್ಲಿ ಹೇಳಲಾಗಿದೆ. 'ಅಂಡಕ ಅಧ್ಯಯನ'ದಲ್ಲಿ ನವಿಲಿನ ಎರಡು ಮೊಟ್ಟೆಗಳ ಮಾಧ್ಯಮದಿಂದ ಧರ್ಮೋಪದೇಶ ಮಾಡಲಾಗಿದೆ. ಆ ಕತೆ ಹೀಗಿದೆ-

ಚಂಪಾನಗರಿಯಲ್ಲಿ ಜಿನದತ್ತ ಮತ್ತು ಸಾಗರದತ್ತರೆಂಬ ಇಬ್ಬರು ಸಾರ್ಥವಾಹರಿರುತ್ತಿದ್ದರು. ಇಬ್ಬರಿಗೂ ಒಬ್ಬೊಬ್ಬ ಮಗನಿದ್ದ. ಆ ಇಬ್ಬರೂ ಮಕ್ಕಳು ಒಂದು ದಿನ ನಗರದ ಹೊರಗಿನ ಉದ್ಯಾನವನದಲ್ಲಿ ವಿಹರಿಸುತ್ತಿದ್ದರು. ಅಲ್ಲಿಯ ಗಿಡ-ಬಳ್ಳಿಗಳ ಗುಂಪಿನಲ್ಲಿ ಹೆಣ್ಣು ನವಿಲು ಮೊಟ್ಟೆಯಿಟ್ಟಿತ್ತು. ಈ ಮಕ್ಕಳು ಆಡುವ ಸದ್ದನ್ನು ಕೇಳುತ್ತಲೇ ನವಿಲು ಅಂಜಿ ಹಾರಿಹೋಗಿ ಹತ್ತಿರದ ಮರದ ಕೊಂಬೆಯೊಂದರ ಮೇಲೆ ಕುಳಿತಿತು. ಹುಡುಗರಿಬ್ಬರೂ ಆ ಗಿಡಬಳ್ಳಿಗಳ ನಡುವೆ ಹೋಗಿ ನೋಡಿದರೆ, ಎರಡು ಸುಂದರವಾದ ಮೊಟ್ಟೆಗಳು ಅವರ ಕಣ್ಣಿಗೆ ಬಿದ್ದವು. ಆ ಮೊಟ್ಟೆಗಳೆರಡನ್ನೂ ಮೆಲ್ಲನೇ ಎತ್ತಿತಂದು ಮನೆಯಲ್ಲಿ ಕೋಳಿಯ ಮೊಟ್ಟೆಗಳೊಡನೆ ಇಟ್ಟುಬಿಟ್ಟರು.

ತಾನು ತಂದಿಟ್ಟ ಮೊಟ್ಟೆಯೊಳಗಿಂದ ನವಿಲಿನ ಮರಿ ಹೊರಬೀಳುವುದೋ ಇಲ್ಲವೋ ಎಂಬುದನ್ನು ಖಚಿತ ಪಡಿಸಿಕೊಳ್ಳೆಂದು ಸಾಗರದತ್ತನ ಮಗನು ದಿನಬೆಳಗಾದರೆ ಆ ಮೊಟ್ಟೆಯನ್ನೆತ್ತಿ

ಮೇಲೆ-ಕೆಳಗೆ ಮಾಡಿ, ತನ್ನ ಕಿವಿಯ ಹತ್ತಿರ ಒಯ್ದು ಅಲ್ಲಾಡಿಸಿ ಸದ್ದು ಕೇಳಲೆತ್ನಿಸುತ್ತಿದ್ದ. ಹೀಗೆ ಮೇಲಿಂದ ಮೇಲೆ ಅಲ್ಲಾಡಿಸಿದ ಕಾರಣ ಆ ತತ್ತಿ ನಿರ್ಜೀವಗೊಂಡು ಅವರೊಳಗಿಂದ ನವಿಲಿನ ಮರಿ ಹೊರಬರಲೇ ಇಲ್ಲ. ಆದರಿಂದ ಸಾಗರದತ್ತನ ಮಗನಿಗೆ ತುಂಬಾ ದುಃಖವಾಯಿತು. ಆದರೆ ತನ್ನ ತತ್ತಿಯೊಳಗಿಂದ ನವಿಲಿನ ಮರಿ ಹೊರ ಬಂದೇಬರುವುದೆಂದು ಜಿನದತ್ತನ ಪುತ್ರನಿಗೆ ಭರವಸೆಯಿತ್ತು. ಆದುದರಿಂದಲೇ, ಆತ ಒಮ್ಮೆ ಕೂಡ ತನ್ನ ತತ್ತಿಯನ್ನೆತ್ತಿ ಮೇಲೆ-ಕೆಳಗೆ ಮಾಡಿ ನೋಡಲಿಲ್ಲ; ಕಿವಿಯ ಹತ್ತಿರ ಒಯ್ದು ಅಲ್ಲಾಡಿಸುವ ಗೊಡವೆಗೂ ಹೋಗಲಿಲ್ಲ. ಕಾಲಕಳೆದ ಮೇಲೆ ಆ ಮೊಟ್ಟೆಯೊಡೆದು ನವಿಲಿನ ಮರಿ ಹೊರ ಬಂದಾಗ ಜಿನದತ್ತನ ಮಗನಿಗೆ ಆನಂದವೇ ಆನಂದ. ಜಿನದತ್ತನ ಮಗನು ಕೂಡಲೇ ಮಯೂರ ಪೋಷಕರನ್ನು ಕರೆಯಿಸಿ ಆ ನವಿಲಿನ ಮರಿಗೆ ನೃತ್ಯ ಕಲೆಯ ತರಬೇತಿ ಕೊಡಬೇಕೆಂದು ಆದೇಶವಿತ್ತ. ಕೆಲ ದಿನಗಳಲ್ಲಿಯೇ ಈ ಹೊಸ ನವಿಲು ನೃತ್ಯ ಕಲೆಯಲ್ಲಿ ಪಳಗಿತ್ತು.

ಸಾರಾಂಶ : ಯಾರು ಶ್ರಮಣ-ನಿರ್ಗ್ರಂಥ ಆಚಾರ್ಯರ ಹತ್ತಿರವಿದ್ದೂ ಅಹಿಂಸೆ, ಸತ್ಯ, ಅಚಾರ್ಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಈ ಐದೂ ವ್ರತಗಳ ಬಗೆಗೆ ಸಂದೇಹ ಹೊಂದಿದವರಾಗಿರುತ್ತಾರೋ, ಅವರು ಸಾಗರದತ್ತನ ಪುತ್ರನಂತೆ ಪಶ್ಚಾತ್ತಾಪ ಪಡುತ್ತ ಸಂಸಾರದಪರಿಭ್ರಮಣದಲ್ಲಿ ತೊಡಗಬೇಕಾಗುತ್ತದೆ.

ಆದರೆ, ಯಾರು ಜಿನದತ್ತನ ಮಗನಂತೆ ನಿಸ್ಸಂದೇಹ ಭಾವದಿಂದ ವ್ರತ-ನಿಯಮಗಳ ಪಾಲನೆ ಮಾಡುತ್ತಾರೋ ಅವರು ಸುಗಮವಾಗಿ ಸಂಸಾರ ಸಾಗರದಿಂದ ಪಾರಗಾಣುತ್ತಾರೆ.

ಇನ್ನೊಂದು ಕತೆ-

ಕಾಶಿಯ ಈಶಾನ್ಯ ದಿಕ್ಕಿನಲ್ಲಿ ಗಂಗಾ ನದಿಯ ದಂಡೆಯ ಒಂದು ದೊಡ್ಡ ಹೊಂಡದಲ್ಲಿ ಅನೇಕ ಉಡ-ಆಮೆ-ಮೊಸಳೆಗಳು ವಾಸವಾಗಿದ್ದವು. ಬದಿಯ ಗಿಡಮರಗಳ ಗುಂಪಿನಲ್ಲಿ ಎರಡು ನರಿಗಳಿರುತ್ತಿದ್ದವು. ಅವುಗಳಿಗೆ ಮಾಂಸ ಸೇವನೆಯ ಚಪಲ. ಆ ಎರಡೂ ನರಿಗಳು ರಾತ್ರಿಯ ಹೊತ್ತಿನಲ್ಲಿ ಮಾಂಸಾಹಾರ ಹುಡುಕುತ್ತ ಹೊರಬರುತ್ತಿದ್ದವು. ಈ ಎರಡು ಆಮೆಗಳು ಆ ನರಿಗಳ ದೃಷ್ಟಿಗೆ ಬಿದ್ದವು. ಅವು ಇನ್ನಷ್ಟು ಹತ್ತಿರ ಬರಲೆಂದು ಕಾಯ್ದುಕೊಂಡು ಕುಳಿತವು.

ಆ ನರಿಗಳು ತಮ್ಮ ಬಳಿ ಬಂದುದನ್ನು ಕಂಡೊಡನೆ ಆಮೆಗಳೆರಡೂ ಸರ್ರನೇ ತಮ್ಮ ಅಂಗಾಂಗಗಳನ್ನು ಒಳಗೆಳೆದುಕೊಂಡು ತಮ್ಮ ಭದ್ರ ಕವಚದಲ್ಲಿ ಸೇರಿಕೊಂಡು, ನಿಶ್ಚಲವಾಗಿ ಕುಳಿತುಬಿಟ್ಟವು. ನರಿಗಳಿನ್ನೂ ಹತ್ತಿರ ಬಂದವು; ಆಮೆಗಳನ್ನು ಅಲ್ಲಾಡಿಸಿ ನೋಡಿದವು; ಅವುಗಳನ್ನು ತಮ್ಮ ಉಗುರುಗಳಿಂದ ಕಾಡಿಸಿ-ಪೀಡಿಸಿಯೂ ನೋಡಿದವು. ಆದರೆ ಎರಡೂ ಆಮೆಗಳು ತಮ್ಮ ಕವಚದಲ್ಲಿ ಭದ್ರವಾಗಿ ಕುಳಿತುಬಿಟ್ಟಿದ್ದವು. ನರಿಗಳು ಎರಡು-ಮೂರು ಸಲ ತಮ್ಮ ಪರಾಕ್ರಮ ನಡೆಸಲು ಪ್ರಯತ್ನಿಸಿ ನೋಡಿ, ಕೊನೆಗೆ ದಣಿದು, ಅಲ್ಲಿಂದ ಕೊಂಚ ದೂರಹೋಗಿ ಸುಮ್ಮನೆ ಕುಳಿತುಕೊಂಡವು.

ನರಿಗಳೆರಡೂ ತಮ್ಮಿಂದ ದೂರ ಹೋದವೆಂದೆನಿಸಿ ಒಂದು ಆಮೆ ಮೆಲ್ಲನೇ ತನ್ನ ಕವಚದಿಂದ ಒಂದು ಕಾಲು ಹೊರದೆಗೆಯಿತು. ಅದರ ಕಡೆಗೇ ಕಣ್ಣಿಟ್ಟುಕೊಂಡು ಕುಳಿತ ನರಿಯು ಕೂಡಲೇ ಧಾವಿಸಿ ಒಂದು ಆಮೆಯ ಪಾದಕ್ಕೆ ಬಾಯಿ ಹಾಕಿತು. ಹಾಗೆಯೇ ಆಮೆಯ ಇತರ ಅವಯವಗಳೂ ಆಹಾರವಾದವು.

ಹಾಗೆಯೇ, ಮತ್ತೊಂದು ಕೂರ್ಮಾಹಾರವೂ ತಮಗೆ ಸಿಗಬಹುದೆಂದು ಎರಡೂ ನರಿಗಳೂ ಕೂರ್ಮದ ಬಳಿ ಬಂದವು. ಆ ಆಮೆಯನ್ನು ಅತ್ತಿತ್ತ ಅಲ್ಲಾಡಿಸಿ ನೋಡಿದವು, ಉರುಳಿಸಿ ನೋಡಿದವು, ಹೊರಳಿಸಿ ನೋಡಿದವು. ಮರಮರಳಿ ಈ ಯತ್ನ ಮಾಡಿನೋಡಿದವು. ಆದರೆ ಆಮೆ ತನ್ನ ಕವಚದಲ್ಲಿ ನಿಶ್ಚಲವಾಗಿ, ನಿರ್ಭಯವಾಗಿ ಕುಳಿತುಬಿಟ್ಟಿತು. ಎರಡೂ ನರಿಗಳು ತಮ್ಮ ಸೋಲೊಪ್ಪಿಕೊಂಡು ಅಲ್ಲಿಂದ ಹೊರಟು ಹೋದವು.

ನರಿಗಳು ದೂರ ಹೋದುದನ್ನರಿತು ಆಮೆಯು ಮೆಲ್ಲಮೆಲ್ಲನೆ ತನ್ನ ಗೋಣೆತ್ತಿ ನಾಲ್ದೆಸೆಗಳ ಕಡೆಗೂ ಕಣ್ಣು ಹರಿಸಿತು. ಬಳಿಕ, ಮೆಲ್ಲನೆ ತನ್ನ ನಾಲ್ಕೂ ಕಾಲುಗಳನ್ನು ಹೊರಗೆ ಚಾಚಿತು. ಹಾಗೆಯೇ ಹೊಂಡದ ದಾರಿ ಹಿಡಿಯಿತು; ಹೊಂಡದೊಳಗಿನ ಬಂಧು-ಬಳಗದೊಡನೆ ಕೂಡಿ ನಕ್ಕು ನಲಿಯಿತು.

ಸಾರಾಂಶ : ಶ್ರಮಣ-ನಿರ್ಗ್ರಂಥನು ತ್ಯಾಗವ್ರತ ಕೈಕೊಂಡರೂ ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ, ಸ್ವಚ್ಛಂದ ಭಾವದಿಂದ ವರ್ತಿಸಿದರೆ, ಅವನಿಗೆ ಮೊದಲನೆಯ ಆಮೆಯ ಹಾಗೆ ಹಲವೊಂದು ಯಾತನೆಗಳನ್ನು ಅನುಭವಿಸಬೇಕಾಗುತ್ತದೆ ಮತ್ತು ಪ್ರಪಂಚದಲ್ಲಿ ಪರಿಭ್ರಮಣ ಮಾಡುತ್ತಿರಬೇಕಾಗುತ್ತದೆ. ಇದಕ್ಕೆ ಪ್ರತಿಯಾಗಿ, ಯಾವ ಶ್ರಮಣ-ಶ್ರಮಣಿಯರು ಪಂಚಮಹಾವ್ರತಗಳನ್ನು ಆಚರಿಸುತ್ತ ತಮ್ಮ ಸಕಲ ಇಂದ್ರಿಯಗಳ ಮೇಲೆ ನಿಯಂತ್ರಣ ಹಾಕಿಕೊಂಡಿರುತ್ತಾರೋ, ಅವರು ಎರಡನೆಯ ಆಮೆಯಂತೆ ದುಃಖದಿಂದ ಮುಕ್ತರಾಗಿ ಸದ್ಗತಿಯನ್ನು ಹೊಂದುತ್ತಾರೆ; ಸಂಸಾರ ಸಾಗರವನ್ನೂ ಈಜಿ ಪಾರಾಗುತ್ತಾರೆ.

ಧನ್ಯ ಮತ್ತುಅವನ ಸೊಸೆಯರ ಕತೆಯೂ ಇದೇ ತರದ ಉಪದೇಶವನ್ನೊಳಗೊಂಡಿದೆ:

ರಾಜಗೃಹದಲ್ಲಿ ಧನ್ಯನೆಂಬ ವ್ಯಾಪಾರಿಯಿರುತ್ತಿದ್ದನು. ಒಂದು ದಿನ, ತನ್ನ ನಾಲ್ವರು ಸೊಸೆಯರಾದ ಉಜ್ಝಿಕಾ, ಭೋಗವತಿ, ರಕ್ಷಿತಾ ಮತ್ತು ರೋಹಿಣಿಯರಿಗೆ ತಲಾ ಐದೈದು ಭತ್ತದ ಕಾಳುಗಳನ್ನಿತ್ತನು. ಆ ಕಾಳುಗಳನ್ನು ತಾನು ಮರಳಿ ಬೇಡಿದಾಗ ಮರಳಿ ಕೊಡಬೇಕೆಂದೂ ಹೇಳಿದನು.

ಮೊದಲನೆಯ ಸೊಸೆ ಆಲೋಚಿಸಿದಳು : "ಮಾವನ ಕಣಜದಲ್ಲಿ ಬೇಕಾದಷ್ಟು ಕಾಳಿನ ಸಂಗ್ರಹವಿದೆಯಲ್ಲ, ಅದರೊಳಗಿಂದಲೇ ಐದು ಕಾಳು ತೆಗೆದು ಕೊಟ್ಟರಾಯಿತು." ಹೀಗೆ ಆಲೋಚಿಸಿ ಆಕೆ ಆ ಐದೂ ಕಾಳುಗಳನ್ನು ಬೀದಿಗೆ ಬಿಸಾಡಿಬಿಟ್ಟಳು. ಎರಡನೆಯ ಸೊಸೆ ಆಡಾಡುತ್ತ ಆ ಐದೂ ಕಾಳುಗಳ ಸಿಪ್ಪೆ ತೆಗೆದು ಕಾಳುಗಳನ್ನು ಬಾಯಿಗೆ ಹಾಕಿ ಚಪ್ಪರಿಸಿದಳು. ಮೂರನೆಯ ಸೊಸೆ ಅವುಗಳನ್ನೊಂದು ಸ್ವಚ್ಛವಾದ ಬಟ್ಟೆಯಲ್ಲಿ ಕಟ್ಟಿ ತನ್ನ ರತ್ನದ ಪೆಟ್ಟಿಗೆಯಲ್ಲಿಟ್ಟು, ಅದನ್ನು ತನ್ನ ತಲೆದಿಂಬಿನ ಬಳಿಗಿರಿಸಿಕೊಂಡು ಬೈಗು-ಬೆಳಗೂ ಅವರ ಮೇಲೆ ಕಣ್ಣಿರಿಕೆಯಿಟ್ಟಳು. ನಾಲ್ಕನೆಯ ಸೊಸೆಯು ಮಳೆಗಾಲ ಬಂದೊಡನೆ ಆ ಕಾಳುಗಳನ್ನು ಹೊಲದಲ್ಲಿ ಬಿತ್ತಿಸಿದಳು; ಫಸಲು ಹಣ್ಣಾದಾಗ ಕೊಯ್ಲು ಮಾಡಿಸಿ ಸುಗ್ಗಿಗೈದಳು; ಹೊಸ ಧಾನ್ಯವನ್ನು ಕಣಜದಲ್ಲಿ ಸುರಕ್ಷಿತವಾಗಿರಿಸಿದಳು. ಹೀಗೆಯೇ ವರುಷ ವರುಷವೂ ಅವಳು ಬಿತ್ತನೆ ನಡೆಸಿದಳು; ಸುಗ್ಗಿ ಮಾಡಿಸಿದಳು.

ಐದು ವರುಷಗಳುರುಳಿದವು. ಧನ್ಯನು ತನ್ನೆಲ್ಲ ಸೊಸೆಯರನ್ನು ಕರೆದು ತಾನು ಕೊಟ್ಟಿದ್ದ ಕಾಳುಗಳನ್ನು ಮರಳಿ ಕೊಡಬೇಕೆಂದು ಕೇಳಿದನು.

ಮೊದಲು ಉಜ್ಝಿ ಕಾಳ ಸರದಿ. ಅವಳು ಮಾವನ ಕಣಜದಿಂದ ಐದು ಕಾಳು ತೆಗೆದು ತಂದು ಅವನ ಕೈಗೊಪ್ಪಿಸಿದಳು. ಮಾವನು ಮೊದಲು ತನಗೆ ಕೊಟ್ಟಿದ್ದ ಕಾಳುಗಳನ್ನು ಬಿಸಾಡಿಬಿಟ್ಟಿದ್ದಳೆಂದೂ ಒಪ್ಪಿಕೊಂಡಳು. ಕಾಳಿನ ಸಿಪ್ಪೆ ತೆಗೆದು ಒಳಗಿನ ಕಾಳುಗಳನ್ನು ತಿಂದುಬಿಟ್ಟಿದ್ದಾಗಿ ಭೋಗವತಿ ಹೇಳಿದಳು. ರಕ್ಷಿಕಾ ತನ್ನ ರತ್ನಕರಂಡಕದಲ್ಲಿ ಹಾಕಿಟ್ಟ ಐದೂ ಕಾಳುಗಳನ್ನು ತಂದು ಮಾವನೆದುರು ಇಟ್ಟಳು. ರೋಹಿಣಿ ತನ್ನ ಕಾಳುಗಳನ್ನು ತರುವುದಕ್ಕೊಂದು ಬಂಡಿ ಬೇಕೆಂದು ಹೇಳಿದಳು.

ಮಾವನೆಂದ : "ಏನಮ್ಮ ಐದು ಕಾಳುಗಳ ಸಲುವಾಗಿ ಬಂಡಿಯೇತಕ್ಕೆ ಬೇಕು?" ರೋಹಿಣಿ ತನ್ನೆಲ್ಲ ವೃತ್ತಾಂತ ಬಿತ್ತರಿಸಿದಳು. ಒಂದು ಬಂಡಿಯ ತುಂಬ ಧಾನ್ಯ ತಂದು ಮಾವನ ಕಣಜದ ಬಳಿಗಿರಿಸಿದಳು.

ರೋಹಿಣಿಯ ಈ ಚಾತುರ್ಯಕ್ಕಾಗಿ ಧನ್ಯನಿಗೆ ಅತ್ಯಂತ ಆನಂದವಾಯಿತು. ನಂತರ ರಕ್ಷಿಕಾಳನ್ನು ಕೋಶದ ವ್ಯವಸ್ಥೆ ನಿಭಾಯಿಸಲು ನಿಯಮಿಸಿದನು; ಭೋಗವತಿಗೆ ಅಡಿಗೆಮನೆಯ ಉಸ್ತುವಾರಿ ನೋಡಿಕೊಂಡಿರುವಂತೆ ಸಲಹೆ ನೀಡಿದನು. ಉಜ್ಝಿಕಾಳನ್ನು ಮನೆಯ ಸ್ವಚ್ಛತೆ ನೋಡಿಕೊಳ್ಳುವ ಕೆಲಸಕ್ಕೊಪ್ಪಿಸಿದನು.

ಸಾರಾಂಶ : ಯಾವ ಶ್ರಮಣ-ನಿರ್ಗ್ರಂಥರು ಮಹಾವ್ರತಗಳನ್ನು ಉಜ್ಝಿಕಾಳಂತೆ ಬೀದಿಗೆಸೆದುಬಿಡುತ್ತಾರೋ ಅವರು ಸಂಘದಿಂದ ತಿರಸ್ಕೃತರಾಗುತ್ತಾರೆ. ಅವರಿಗೆ ಅಧೋಗತಿ ತಪ್ಪಿದ್ದಲ್ಲ.

ಯಾವ ಶ್ರಮಣ-ನಿರ್ಗ್ರಂಥರು ಪಂಚಮಹಾವ್ರತಗಳನ್ನು ಗ್ರಹಣಮಾಡಿ ನಂತರ ತಮ್ಮ ಉಪಜೀವನಕ್ಕಾಗಿ ಮಾತ್ರವೇ ಅವುಗಳನ್ನು ಉಪಯೋಗಿಸುತ್ತಾರೋ ಅವರು ಭೋಗವತಿ (ಭೋಗಮಾಡುವಾಕೆ)ಯಂತೆ ಮೋಕ್ಷದಿಂದ ವಂಚಿತರಾಗಿ ಅಧೋಗತಿ ಕಾಣುತ್ತಾರೆ.

ಯಾವ ಶ್ರಮಣ-ನಿರ್ಗ್ರಂಥರು ಪಂಚಮಹಾವ್ರತಗಳ ರಕ್ಷಣೆಯಲ್ಲಿ ರಕ್ಷಿಕಾಳಂತೆ (ರಕ್ಷಣೆ ಮಾಡುವವಳು) ಲವಲವಿಕೆಯುಳ್ಳವರಾಗಿರುತ್ತಾರೋ ಅವರು ಸಂಘದಲ್ಲಿ ಪೂಜ್ಯರೆನಿಸಿ ಮನುಷ್ಯ ಜನ್ಮವನ್ನು ಸಾರ್ಥಕಗೊಳಿಸುತ್ತಾರೆ.

ಯಾವ ಶ್ರಮಣ-ನಿರ್ಗ್ರಂಥರು ರೋಹಿಣಿಯಂತೆ (ಬೆಳೆಸುವವಳು) ಪಂಚ ಮಹಾವ್ರತಗಳ ಸಂವರ್ಧನ ಮಾಡುತ್ತಾರೋ ಅವರು ಸಂಘದಲ್ಲಿ ವಂದನೀಯರೆನಿಸಿ ನಿರ್ವಾಣ-ಪದವನ್ನು ಸಂಪಾದಿಸುತ್ತಾರೆ.

ಅರ್ಥ (ಹಣ) ಪ್ರಧಾನವಾದ ಕಥೆ-ಕಥಾನಕಗಳೂ ಜೈನ ಸಾಹಿತ್ಯದಲ್ಲಿ ಸಾ ಕಷ್ಟು ಸಂಖ್ಯೆಯಲ್ಲಿ ರಚಿಸಲ್ಪಟ್ಟಿವೆ. ಇದಕ್ಕೆ ಪ್ರಧಾನ ಕಾರಣವೆಂದರೆ ಜೈನ ಮತಾವಲಂಬಿಗಳು ಕೈಗೊಳ್ಳುತ್ತಿದ್ದ ಉದ್ಯೋಗ-ವ್ಯವಹಾರ ಮತ್ತು ಅವರು ಅದಕ್ಕೆ ನೀಡುತ್ತಿದ್ದ ಮಹತ್ವ. ತಮ್ಮ ತಂದೆ-ತಾತಂದಿರು ಗಳಿಸಿಟ್ಟ ಆಸ್ತಿ-ಸಂಪತ್ತಿಯ ಮೇಲೆ ಅವಲಂಬಿಸದೆ ಸ್ವಯಂಶಕ್ತಿಯಿಂದ ಧನಾರ್ಜನೆ ಮಾಡುವುದೇ ಜೈನ ಯುವಕರಲ್ಲಿ ಬೆಳೆದು ಬಂದ ಪರಂಪರೆ. ದೊಡ್ಡ ದೊಡ್ಡ ಮೀನು-ಮೊಸಳೆಗಳು ಹಡಗುಗಳನ್ನೇ ಉರುಳಿಸಿ ಹಾಕಬಹುದೆಂಬ ಭಯದ ಕಾಲದಲ್ಲೂ ಅವರು ಸಾಹಸದ ಜಲಪರ್ಯಟನ ಕೈಕೊಂಡು ಪರದೇಶಗಳಿಗೆ ಹೋಗುತ್ತಿದ್ದರು. ಅರಣ್ಯಗಳನ್ನು ದಾಟಿ ಹೋಗುವಾಗ ಕಾಡು ಪಶು-ಪ್ರಾಣಿಗಳ, ಕಳ್ಳ-ಕಾಕರ ಭಯವಿದ್ದಾಗಲೂ ದೂರ ದೂರದ

ಪ್ರಯಾಣ ಕೈಕೊಳ್ಳುತ್ತಿದ್ದರು; ಪ್ರಾಣಿಗಳ ಬೆನ್ನೇರಿ ಇಕ್ಕಟ್ಟಾದ ದರಿ-ಕಂದರಗಳನ್ನು ದಾಟಿ ಹೋಗುತ್ತಿದ್ದರು. ಈ ದೂರ ದೂರದ ಪ್ರವಾಸಗಳ ಆಯಾಸವನ್ನು ನಿವಾರಿಸುವ ರೋಮಾಂಚಕಾರೀ ವರ್ಣನೆಗಳು, ಮುತ್ತುಮಣಿಗಳ ವ್ಯಾಪಾರಿಗಳ ಸಾಹಸಪೂರ್ಣ ಕಥಾನಕಗಳು, ಅವರ ವಿಶಿಷ್ಟವಾದ ಭಾಷೆ, ಕೊಡುಕೊಳ್ಳುವ ವ್ಯವಹಾರ, ವಿಭಿನ್ನ ದೇಶಗಳ ಸಂಸ್ಕೃತಿ, ರೀತಿ-ನೀತಿ, ಆಚಾರ-ವಿಚಾರ ಮುಂತಾದವುಗಳೆಲ್ಲ ಜೈನ ಕಥೆಗಳಲ್ಲಿ ಸಮಾವೇಶಗೊಂಡು ಅವು ರೋಚಕ ಕಥೆಗಳಾಗಿ ಪರಿಣಮಿಸಿದ್ದುಂಟು. ಈ ದೃಷ್ಟಿಯಿಂದ ವಸುದೇವ ಹಿಂಡಿಯಲ್ಲಿ ಉಲ್ಲೇಖಿಸಲಾದ ಚಂಪಾದ ವ್ಯಾಪಾರಿಯ ಮಗ ಚಾರುದತ್ತನ ಕಥೆ ಗಮನಾರ್ಹವಾಗಿದೆ.

ಈ ಕಥಾ ಸಾಹಿತ್ಯ ಸೃಷ್ಟಿ ಕೇವಲ ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಿಗೆ ಮಾತ್ರವೇ ಸೀಮಿತವಾಗಿರದೆ ಅಪಭ್ರಂಶ, ಮಧ್ಯಕಾಲೀನ ಹಳೆಯ ಗುಜರಾತೀ, ರಾಜಸ್ಥಾನೀ ಮತ್ತು ಹಳೆಯ ಹಿಂದೀ ಭಾಷೆಗಳಲ್ಲಿಯೂ ನಡೆದಿದೆ. ಆಧುನಿಕ ಭಾರತೀಯ ಭಾಷಾ ವಿಕಾಸದ ದೃಷ್ಟಿಯಿಂದಲೂ ಈ ಸಾಹಿತ್ಯದ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ.

ಆ ಕಾಲಕ್ಕೆ ದಕ್ಷಿಣ ಭಾರತವೂ ಜೈನ ಧರ್ಮದ ಕೇಂದ್ರವೆನಿಸಿತ್ತು. ಆದರಿಂದಾಗಿ ಜೈನ ವಿದ್ವಾಂಸರು ಕನ್ನಡ, ತಮಿಳು ಮತ್ತು ತೆಲುಗು ಸಾಹಿತ್ಯಗಳನ್ನು ಸಮೃದ್ಧಗೊಳಿಸಿದರು. ಮುಖ್ಯವಾಗಿ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಸಾಹಿತ್ಯದ ಸಿದ್ಧಶೈಲಿಯೊಂದು ರೂಪುಗೊಂಡಿತು. ಜೈನ ವಿದ್ವಾಂಸರು ಈ ಭಾಷೆಗಳಲ್ಲಿ ಮಹಾಕಾವ್ಯ, ವ್ಯಾಕರಣ, ಕೋಶ-ಗ್ರಂಥಗಳ ನಿರ್ಮಾಣಗೈದರು. ಪಂಪ, ರನ್ನ, ಪೊನ್ನರಂಥ ಜೈನ ಕವಿಗಳು ರಚಿಸಿದ ಕನ್ನಡ ಸಾಹಿತ್ಯ ಕೃತಿಗಳು ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲದೆ, ಭಾರತೀಯ ಇತರ ಭಾಷಾ ಸಾಹಿತ್ಯಕ್ಕೂ ಸಲ್ಲಿಸಿದ ಅಪೂರ್ವ ಕಾಣಿಕೆಗಳೆನಿಸಿವೆ.

## ಜ್ಞಾನಭಂಡಾರಗಳ ಸ್ಥಾಪನೆ

ಮುದ್ರಣ ಸೌಕರ್ಯವೆಂಬುದಿರದ ಆ ಕಾಲದಲ್ಲಿ ಸೃಷ್ಟಿಯಾದ ಈ ಸಾಹಿತ್ಯ ರಾಶಿಯನ್ನು ಕಾಪಾಡಿಕೊಂಡಿಟ್ಟು ಅಧ್ಯಯನ ನಡೆಸುವ ದೃಷ್ಟಿಯಿಂದ ದೇಶದೊಳಗೆಲ್ಲ ಜ್ಞಾನಭಂಡಾರಗಳನ್ನು ಸ್ಥಾಪಿಸುವುದಗತ್ಯವೆನಿಸಿತು. ಜೈನ ಸಂಘಗಳ ಉತ್ತರ-ದಕ್ಷಿಣ ಪ್ರದೇಶಗಳಲ್ಲಿ ಸಾಧ್ಯವಾದ ಕಡೆಗೆಲ್ಲ ಜ್ಞಾನಭಂಡಾರಗಳನ್ನು ಸ್ಥಾಪಿಸಿ ಈ ಕೊರತೆಯನ್ನು ನೀಗಿಸಿದವು. ಹಾಗೆ ನೋಡಿದರೆ ಗ್ರಂಥಗಳನ್ನು ಬರೆಯುವುದೂ ಬರೆಯಿಸುವುದೂ ಬಲು ಕಷ್ಟ ಸಾಧ್ಯವಾದ ಕೆಲಸವೇ ಹೌದು. ಈ ಕೆಲಸವನ್ನು ಹಾಗೂ-ಹೀಗೂ ಮಾಡಿ ಮುಗಿಸಿದರೂ, ಬೆಂಕಿ, ನೀರು, ಕಳವು, ಇಲಿ, ಕ್ರಿಮಿಕೀಟಗಳ ಕಾಟದಿಂದ ಗ್ರಂಥ ಸಂರಕ್ಷಣೆ ಮಾಡುವುದಿನ್ನೂ ಕಠಿಣವಾದ ಕೆಲಸವೆನಿಸಿತ್ತು. ಆದ್ದರಿಂದಲೇ ಜೈನ ಆಚಾರ್ಯರು ಶ್ರುತಿ-ಪಂಚಮಿ ಅಥವಾ ಜ್ಞಾನ-ಪಂಚಮಿಗೊಂದು ಪವಿತ್ರವಾದ ಹಬ್ಬವೆಂಬಷ್ಟು ಮಹತ್ವವಿತ್ತು ಗ್ರಂಥಗಳ ಸ್ವಚ್ಛತೆ, ಶಾಸ್ತ್ರಗಳ ಪೂಜೆ-ಅರ್ಚನೆಗಳ ಉಪಕ್ರಮವನ್ನು ರೂಢಿಗೊಳಿಸಿದರು. ಜೈಸಲ್ಮೇರ್, ಖಂಬಾತ, ಪಾಟಣ, ಜಯಪುರ, ಕಾರಂಜಾ, ಮೂಡಬಿದ್ರಿ ಮುಂತಾದ ಸ್ಥಳಗಳಲ್ಲಿ ಇಂಥ ಗ್ರಂಥಭಂಡಾರಗಳನ್ನು ಸ್ಥಾಪಿಸಲಾಯಿತು. ಇವುಗಳಲ್ಲಿ ಕೇವಲ ಜೈನ ಧರ್ಮಗಳೇ ಅಲ್ಲದೆ, ಬೌದ್ಧ ಮತ್ತು ವೈದಿಕ ಗ್ರಂಥಗಳನ್ನೂ ಸುರಕ್ಷಿತವಾಗಿ ಇಡಲಾಯಿತು. ದುರ್ಲಭವೆನಿಸಿಬಿಟ್ಟಿದ್ದ ಅನೇಕ ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಕನ್ನಡ, ತಮಿಳು, ಗುಜರಾತಿ, ಹಿಂದಿ ಮರಾಠಿ ಮತ್ತು ಪಾರಸೀ ಭಾಷೆಗಳಲ್ಲಿ ತಾಡೋಲೆ,

ಕಾಗದ ಮತ್ತು ವಸ್ತುಗಳ ಮೇಲೆ ಬರೆದಿರಿಸಿದ ಗ್ರಂಥಗಳು ಭಾರತದ ನೂರಾರು ಹಳ್ಳಿ-ಪಟ್ಟಣಗಳಲ್ಲಿ ಸ್ಥಾಪಿತವಾದ ಇಂಥ ಗ್ರಂಥಭಂಡಾರಗಳಲ್ಲಿ ಲಭ್ಯವಾದುದುಂಟು. ಗುಜರಾತಿ ಭಾಷೆ ಮತ್ತು ಸಾಹಿತ್ಯದ ಇತಿಹಾಸದ ಕ್ರಮಬದ್ಧ ಅಧ್ಯಯನಕ್ಕೆ ಅನಿವಾರ್ಯವೆನಿಸುವ ಅನೇಕ ಉಪಯುಕ್ತ ಗ್ರಂಥಗಳೂ ಉಪಲಬ್ಧವಾದುದೊಂದು ವಿಶೇಷ. ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯದ ರಕ್ಷಣೆ ಮಾಡುವ ಉದ್ದೇಶದಿಂದ ಜೈನ ಶ್ರಮಣ ಮತ್ತು ಶ್ರಾವಕರ ಮೂಲಕ ನಡೆದ ಈ ಮಹತ್ಕಾರ್ಯ ಸ್ವರ್ಣಾಕ್ಷರಗಳಲ್ಲಿ ಬರೆದಿಡುವಂತಹದು.

## ಕಲಾ ಕ್ಷೇತ್ರದಲ್ಲಿ

ಕಲೆ ಮತ್ತು ಸ್ಥಾಪತ್ಯ ಕ್ಷೇತ್ರಗಳಲ್ಲಿಯೂ ಜೈನ ಮತಾವಲಂಬಿಗಳು ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಜೈನ ಮಂದಿರಗಳ ನಿರ್ಮಾಣವೆಂದರೊಂದು ಸಾಮಾಜಿಕ ಅವಶ್ಯಕತೆಯೆಂದೇ ಆಗ ಭಾವಿಸಲಾಗುತ್ತಿತ್ತು. ಈ ಮಂದಿರಗಳಲ್ಲಿ ಜನರೆಲ್ಲ ಸೇರಿ ತೀರ್ಥಂಕರ ಭಗವಾನರ ಭಜನೆಗೈಯುತ್ತಿದ್ದರು; ಪೂಜೆ ಸಲ್ಲಿಸುತ್ತಿದ್ದರು; ಶಾಸ್ತ್ರಗಳ ಸ್ವಾಧ್ಯಾಯ ನಡೆಸುತ್ತಿದ್ದರು; ರಥಯಾತ್ರೆ ಹೊರಡಿಸುತ್ತಿದ್ದರು; ಕ್ಷಮಾವಾಣಿಯ ಉತ್ಸವವನ್ನಾಚರಿಸುತ್ತಿದ್ದರು; ಮತ್ತು ಸಾಧು-ಸಂತರ ವ್ಯಾಖ್ಯಾನಗಳನ್ನೂ ಏರ್ಪಡಿಸುತ್ತಿದ್ದರು. ಈ ದೃಷ್ಟಿಯಿಂದಲೇ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಮಂದಿರ, ಮಠ, ಧರ್ಮಛತ್ರ ಮುಂತಾದವುಗಳ ನಿರ್ಮಾಣಕಾರ್ಯ ನಡೆಯಿತು. ಈ ನಿರ್ಮಾಣ ಕಾರ್ಯದಲ್ಲಿ ಧರ್ಮನಿಷ್ಠ ಸ್ವಭಾವದ ಜೈನ ಅರಸರು, ಮಂತ್ರಿಗಳು, ಧನಿಕರು, ವ್ಯಾಪಾರಿಗಳೂ ಆಸಕ್ತಿ ವಹಿಸಿ ಈ ಮಂದಿರಗಳ ನಿರ್ಮಾಣಕ್ಕಾಗಿ ಬೇಕಾದ ಭೂದಾನ, ಗ್ರಾಮದಾನ, ಧನ ಸಹಾಯ ಮಾಡುತ್ತಿದ್ದರು. ರಾಜಸ್ಥಾನದಲ್ಲಿರುವ ಆಬೂ ಪರ್ವತದಲ್ಲಿ ವಸ್ತುಪಾಲ ಮತ್ತು ತೇಜಪಾಲ ದೊರೆಗಳಿಂದ ನಿರ್ಮಿತವಾದ ಶ್ವೇತಶಿಲಾ ದೇಲವಾಡಾ ಮಂದಿರಗಳು ಕಲಾ ಕೌಶಲ್ಯದ ದೃಷ್ಟಿಯಿಂದ ಅನುಪಮವೆನಿಸಿಕೊಂಡಿವೆ. ಸೌರಾಷ್ಟ್ರದಲ್ಲಿ ಶತ್ರುಂಜಯ ಬೆಟ್ಟಗಳಲ್ಲಿ ನೂರಾರು ಸಣ್ಣ-ಪುಟ್ಟ ಮಂದಿರಗಳು ಕಟ್ಟಲ್ಪಟ್ಟಿವೆ. ಇಲ್ಲಿಯ ಆದಿನಾಥ ಮಂದಿರವು ಪ್ರಖ್ಯಾತವಾಗಿದ್ದು, ಪಶ್ಚಿಮ ಭಾರತದಲ್ಲಿ 10ನೆಯ ಶತಮಾನದಲ್ಲಿ ಪ್ರಚಲಿತವಿದ್ದ ಮೂರ್ತಿ ಕಲೆಗೆ ಅದೊಂದು ಸುಂದರ ಮಾದರಿಯೆಂದೂ ಹೆಸರಾಗಿದೆ. ಇದೇ ಶತಮಾನದಲ್ಲಿ ಶ್ರವಣ ಬೆಳಗೊಳದಲ್ಲಿ ರಾಜಮಲ್ಲ ದೊರೆಯ ಸಚಿವ ಮತ್ತು ಸೇನಾಪತಿಯಾಗಿದ್ದ ಚಾವುಂಡರಾಯನು ಅಪಾರ ದ್ರವ್ಯ ವೆಚ್ಚ ಮಾಡಿ ನಿರ್ಮಿಸಿದ ಭವ್ಯಾಕಾರದ ಗೊಮ್ಮಟೇಶ್ವರ ಬಾಹುಬಲಿಯ ವಿಗ್ರಹವಂತೂ ಸುಪ್ರಸಿದ್ಧವಾಗಿದೆ. ಇಲ್ಲಿ ಬಲು ವಿಜೃಂಭಣೆಯಿಂದ ಮಹಾಮಸ್ತಕಾಭಿಷೇಕ ಉತ್ಸವ ನಡೆಸಲಾಗುತ್ತದೆ. ಹಾಗೆಯೇ, ಕಾರ್ಕಳ, ವೇಣೂರುಗಳಲ್ಲಿಯೂ ಬಾಹುಬಲಿಯ ಮೂರ್ತಿ ಪ್ರತಿಷ್ಠಾಪನೆಯಾಗಿದೆ. 14ನೆಯ ಶತಮಾನದಲ್ಲಿ ಮೂಡುಬಿದ್ರಿಯಲ್ಲಿ ಕಟ್ಟಲಾದ ಚಂದ್ರನಾಥ ಮಂದಿರವೂ ಪ್ರಸಿದ್ಧವಾಗಿದೆ. ಮಂದಿರದ ಪ್ರಾಂಗಣದಲ್ಲಿ ಸುಂದರವೂ ಭವ್ಯವೂ ಆದ ಮಾನಸ್ತಂಭವನ್ನು ನಿಲ್ಲಿಸಲಾಗಿದೆ. ಕುಶಾಣರ ಕಾಲದಲ್ಲಿ ಮಥುರಾದಲ್ಲಿ ನಿರ್ಮಿಸಲಾದ ಜೈನ ಸ್ತೂಪಗಳ ಬಗ್ಗೆ ಈ ಮೊದಲೇ ಹೇಳಲಾಗಿದೆ. ಇವುಗಳಲ್ಲದೆ ಹಲವೊಂದು ಯಕ್ಷ-ಯಕ್ಷಿಣಿಯರ ಮೂರ್ತಿಗಳೂ, ಧಾತುವಿಗ್ರಹಗಳೂ, ಗುಹೆಗಳೂ, ಭಿತ್ತಿ ಚಿತ್ರಗಳೂ, ತಾಡೋಲೆ ಚಿತ್ರಗಳೂ, ಕಟ್ಟಿಗೆಯಲ್ಲಿ ಕೆತ್ತನೆ ಚಿತ್ರಗಳೂ ಜೈನರಿಂದ ರಚಿಸಲ್ಪಟ್ಟಿವೆ.

ಹೀಗೆ 9ರಿಂದ 11ನೆಯ ಶತಮಾನದ ವರೆಗೆ, ತದನಂತರವೂ, ಜೈನ ಕಲೆಯ ಮೂಲಕ ಜೈನ ಧರ್ಮದ ಪ್ರಚಾರ ಮತ್ತು ಪ್ರಸಾರ ಸಾಕಷ್ಟು ಪ್ರಮಾಣದಲ್ಲಿ ನಡೆಯಿತು. ಇದರಿಂದಾಗಿ ನಗರಗಳ ಸದ್ದು-ಗೊಂದಲದಿಂದ ದೂರವಿರುವ ಗುಡ್ಡ-ಬೆಟ್ಟಗಳ ಪ್ರಾಕೃತಿಕ ಪರಿಸರದಲ್ಲಿ ಜೈನ ತೀರ್ಥಕ್ಷೇತ್ರಗಳ ಸ್ಥಾಪನೆ ನಡೆಯಿತು. ಈ ಗುಡ್ಡ-ಬೆಟ್ಟಗಳಲ್ಲಿ ದೊರೆಯುವ ಶಿಲಾಲಿಪಿ ಮುಂತಾದ ಪುರಾತತ್ವ ಸಾಮಗ್ರಿಯಿಂದ ಆ ಕಾಲದ ಸಾಮಾಜಿಕ, ಧಾರ್ಮಿಕ ಮತ್ತು ರಾಜನೀತಿಯ ವಿವಿಧ ಸ್ತರಗಳ ಪರಿಚಯವುಂಟಾಗುತ್ತದೆ.

## ಅಹಿಂಸೆಯ ವ್ಯಾಪಕತೆ

ಮಹಾವೀರ ಮತ್ತು ಬುದ್ಧನ ಕಾಲದ ಧರ್ಮಾಚಾರ್ಯರು ತಮ್ಮ ಸರಳವಾದ ಉಪದೇಶವನ್ನು ಜನಸಾಮಾನ್ಯರ ವರೆಗೂ ತಲುಪಿಸಬೇಕೆಂದು ಪ್ರಯತ್ನಶೀಲರಾಗಿರುತ್ತಿದ್ದರು. ಅದೇ ಅವರ ಧರ್ಮವೆಂದು ಅವರು ಭಾವಿಸುತ್ತಿದ್ದರು. ಸಾಮಾನ್ಯ ಜನರು ನ್ಯಾಯ-ನೀತಿಗಳಿಂದ ನಡೆದು ಸುಖ-ಶಾಂತಿ ಪಡೆಯುವಂತೆ ಮಾಡುವುದೇ ಅವರ ಏಕಮೇವ ಉದ್ದೇಶವಾಗಿತ್ತು. ಈ ದೃಷ್ಟಿಯಿಂದ ಅಹಿಂಸೆಯ ಉಪದೇಶ ತುಂಬ ಹಿತಕರವೆನಿಸಿತ್ತು. ಬೇರೊಬ್ಬರಿಗೆ ಯಾವ ತೊಂದರೆ ಕೊಡಬಾರದು, ಸ್ವಾರ್ಥ ಸಾಧನೆಗಾಗಿ ಶೋಷಣೆಯ ವೃತ್ತಿಯನ್ನನುಸರಿಸಬಾರದು ಮತ್ತು ನಿಮ್ಮೊಡನೆ ಇತರರು ಹೇಗೆ ವರ್ತಿಸಬೇಕೆಂದು ನಿಮ್ಮ ನಿರೀಕ್ಷೆಯಿರುವುದೋ ಹಾಗೆ ನೀವು ಇತರರೊಡನೆ ವರ್ತಿಸಬೇಕೆಂಬುದೇ ಅಹಿಂಸೆಯ ತಿರುಳಾಗಿದೆ. ಹೀಗೆ ಮಾಡುವುದರಿಂದ ಜಗತ್ತಿನಲ್ಲಿ ಸುಖ-ಶಾಂತಿಗಳು ನೆಲೆಗೊಳ್ಳಬಲ್ಲವು. ನಿಮಗೆಷ್ಟು ಬೇಕೋ ಅಷ್ಟನ್ನೇ ಪಡೆಯಿರಿ, ನಿಮ್ಮ ಆಸೆಗಳ ಮೇಲೆ ಹತೋಟಿಯಿರಲಿ ಮತ್ತು ಇತರರ ಸುಖ-ಸಾಧನಗಳನ್ನು ಕಂಡು ಕನಲದಿರಿ. ಹೀಗೆ ಮಾಡುವುದಾಗದಿದ್ದರೆ ಅಹಿಂಸೆಯ ಪಾಲನೆ ಮಾಡುವುದು ಕಷ್ಟ. ವಸ್ತು-ಒಡವೆಗಳ ಸಂಗ್ರಹ ಪ್ರವೃತ್ತಿ ಪರಸ್ಪರ ಈರ್ಷ್ಯೆ, ದ್ವೇಷ ಮತ್ತು ಕಲಹಗಳನ್ನು ಹುಟ್ಟಿಸುತ್ತದೆ. ಕೊನೆಗೆ, ಪರಸ್ಪರ ಸಂಘರ್ಷದಿಂದ ವಿಶ್ವದಲ್ಲಿ ನಡೆಯುವ ಯುದ್ಧಗಳು ಅನಿವಾರ್ಯವೆನಿಸಿ ಬಿಡುತ್ತವೆ. ಈ ಅನಿಷ್ಟಗಳಿಂದ ಉಳಿಯಲು ಬೌದ್ಧಿಕ ಸಮತೂಕ ಬೇಕು. ಇಂದಿನ ಯುಗದಲ್ಲಿ ಎಲ್ಲಿದೆ ಆ ಸಮತೂಕ? ವಿವೇಕ ಬುದ್ಧಿಯನ್ನು ಕಡೆಗಣಿಸಿ, ಮೇಲುನೋಟಕ್ಕೆ ಕಾಣುವ ರೀತಿಯಲ್ಲಿ ಅಹಿಂಸಾವ್ರತ ಪಾಲಿಸುವುದರಿಂದ ಏನೂ ಪ್ರಯೋಜನವಾಗಲಾರದು. ಅದಕ್ಕಾಗಿ, ರಾಗ-ದ್ವೇಷಗಳನ್ನು ಬಿಡಬೇಕು, ಸ್ಥೈರ್ಯದಿಂದ ಇತರರ ದೃಷ್ಟಿಕೋನವನ್ನೂ ಅರ್ಥಮಾಡಿಕೊಳ್ಳಬೇಕು. ಮಾನಸಿಕ ಸಹಿಷ್ಣುತೆಯ ಮೂಲಕವೇ ಸಮಾಜವು ಸುಖ-ಶಾಂತಿಗಳನ್ನು ಸಂಪಾದಿಸಬಲ್ಲದು. ಭಗವಾನ ಮಹಾವೀರರ ಉಪದೇಶ ಹೀಗಿದೆ : "ಶಾಂತಿಯಿಂದ ಕ್ರೋಧವನ್ನು ಜಯಿಸಿರಿ, ನಮ್ರತೆಯಿಂದ ಅಭಿಮಾನವನ್ನು ಜಯಿಸಿರಿ, ಸರಳತೆಯಿಂದ ಮಾಯೆಯನ್ನು ಜಯಿಸಿರಿ ಮತ್ತು ಸಂತೋಷದಿಂದ ಲೋಭವನ್ನು ಜಯಿಸಿರಿ." ಈ ವೃತ್ತಿ ಮೈಗೂಡಿದರೆ ಮಾತ್ರ "ಸಕಲ ಪ್ರಾಣಿಗಳೊಡನೆ ಮೈತ್ರಿ, ಗುಣವಂತರೊಡನೆ ಆನಂದ ಮತ್ತು ತಮಗಾಗದ ಜನರೊಡನೆಯೂ ಮಧ್ಯಸ್ಥ ಮಾರ್ಗ"ವನ್ನು ಸಾಧಿಸುವುದು ಸುಲಭವಾಗುತ್ತದೆ.

## ಅಹಿಂಸೆಯ ವ್ಯಾವಹಾರಿಕತೆ

ಈ ನಮ್ಮ ಯುಗದಲ್ಲಿ ಮಹಾತ್ಮಾ ಗಾಂಧೀಜಿಯವರು ಅಹಿಂಸೆಯ ಪ್ರಬಲ ಸಮರ್ಥಕರೆನಿಸಿದರು. ಭಾರತ-ಸ್ವಾತಂತ್ರ್ಯದ ಆಂದೋಲನವನ್ನು ಜನತೆಯ ವರೆಗೂ ತಲುಪಿಸಲು ಅವರು ಅಹಿಂಸೆಯನ್ನು ರಾಜನೀತಿಯ ಸಾಧನವೆಂದೇ ಬಳಸಿದರು. ಅವರ ಅಹಿಂಸಾ ಪ್ರಯೋಗ ವಿಶ್ವದ ಇತಿಹಾಸದಲ್ಲಿಯೇ ಅದ್ವಿತೀಯವೆನಿಸಿತು. ಗಾಂಧೀಜಿಯವರ ದೃಷ್ಟಿಯಲ್ಲಿ ಸತ್ಯವೇ ದೇವರು ಮತ್ತು ಈ ದೇವರ ಸಾಕ್ಷಾತ್ಕಾರಕ್ಕೆ ಅಹಿಂಸೆಯೇ ಪರಮೋಚ್ಚ ಸಾಧನೆ. ಶುದ್ಧ ಸಾತ್ವಿಕ ಆಹಾರ, ಉಪವಾಸ, ಆತ್ಮಶುದ್ಧಿ, ಕಷ್ಟ-ಸಹಿಷ್ಣುತೆ ಮತ್ತು ಕ್ಷಮಾಗುಣಗಳು ಅಹಿಂಸೆಯ ಅವಿಭಾಜ್ಯ ಅಂಗಗಳೆಂದು ಅವರು ಭಾವಿಸಿದ್ದರು. ಯಾರೊಬ್ಬರ ಮೇಲೆ ಖಡ್ಗ ಪ್ರಹಾರ ಮಾಡುವುದಕ್ಕಿಂತ ಹೆಚ್ಚಿನ ಪೌರುಷ ಯಾರೊಬ್ಬರನ್ನೂ ನೋಯಿಸದಿರುವಂಥ ಅಹಿಂಸಾ ಪಾಲನೆಯಲ್ಲಿದೆಯೆಂದು ಅವರ ಅಭಿಪ್ರಾಯವಾಗಿತ್ತು. ಅಹಿಂಸೆಯೆಂದರೆ ಸೇಡಿನ ಭಾವನೆಯಿಂದ ಸಂಪೂರ್ಣ ಮುಕ್ತರಾಗಿರುವುದು. ಇದು ಅಷ್ಟು ಸುಲಭವೇನಲ್ಲ. ಮಹಾತ್ಮಾ ಗಾಂಧೀಜಿಯವರು ಜೈನ ಧರ್ಮದ ಅಹಿಂಸಾ ತತ್ವದಿಂದ ಪ್ರಭಾವಿತರಾಗಿದ್ದರು. ಸೌರಾಷ್ಟ್ರದ ಸಂತ ರಾಜಚಂದ್ರಭಾಯಿ (ಶ್ರೀಮದ್‌ರಾಜಚಂದ್ರ) ಅವರ ಗಾಢವಾದ ಪರಿಚಯವೂ ಗಾಂಧೀಜಿಯವರಿಗಿತ್ತು. ಗಾಂಧೀಜಿ ದಕ್ಷಿಣ ಆಫ್ರಿಕೆಯಲ್ಲಿದ್ದಾಗ ವ್ಯಕ್ತಪಡಿಸಿದ ಶಂಕೆ-ಸಂದೇಹಗಳನ್ನೆಲ್ಲ ನಿವಾರಣ ಮಾಡಿ ಅವರ ಮನಸ್ಸಿನಲ್ಲಿ ಹಿಂದೂ ಧರ್ಮವನ್ನು ಸ್ಥಿರಪಡಿಸಿದ್ದವರು ರಾಜಚಂದ್ರಭಾಯಿಯವರು. ಈ ಸಂದರ್ಭದಲ್ಲಿ ಭಾರತದ ಹೊರಗಿದ್ದ ಅಹಿಂಸೆಯ ಪುರಸ್ಕರ್ತರೂ, ನೊಬೆಲ್ ಪಾರಿತೋಷಕ ವಿಜೇತರೂ ಆದ ಆಲ್ಬರ್ಟ್ ಸ್ವಾಯಿತ್ಸರ್ (1875-1965) ಅವರ ಹೆಸರೂ ಉಲ್ಲೇಖನೀಯವಾಗಿದೆ. 'ಬದುಕಿರಿ, ಬದುಕಿರಗೊಡಿರಿ' ಎಂಬ ಸಿದ್ಧಾಂತವೇ ಇವರ ಜೀವನದ ಉಸಿರಾಗಿತ್ತು; ಪರಮ ಧ್ಯೇಯವೆನಿಸಿತ್ತು. ಅವರ ಅಭಿಪ್ರಾಯದಂತೆ ಮನುಷ್ಯರಲ್ಲಿ ಒಬ್ಬರಿಗಿನ್ನೊಬ್ಬರ ಆವಶ್ಯಕತೆಯಿದ್ದೇ ಇರುತ್ತದೆ. ಆದುದರಿಂದ ಪರಸ್ಪರ ಶ್ರದ್ಧೆ, ನಿಷ್ಠೆ, ನಿರಹಂಕಾರಗಳಿಲ್ಲದ ಜೀವನ ಪರಿಪೂರ್ಣ ಜೀವನವೆನಿಸಲಾರದು.

## ಮಹಾವೀರರ ಧರ್ಮ-ಸಕಲರಿಗಾಗಿ

ಭಗವಾನ ಮಹಾವೀರರ ಉಪದೇಶ ಯಾವೊಂದು ಜಾತಿ, ಅಥವಾ ಸಂಪ್ರದಾಯದವರಿಗೆ ಮಾತ್ರವೇ ಸೀಮಿತವಾಗಿಲ್ಲ. ಅವರ ಧರ್ಮವೆಂದರೆ 'ನಿರ್ಗ್ರಂಥ ಧರ್ಮ'. ಅಂದರೆ ಅದರ ಅನುಯಾಯಿಗಳ ಮನಸ್ಸಿನಲ್ಲಿ ಯಾವ ಗ್ರಂಥಿ-ಗಂಟು-ಇರಕೂಡದೆಂದರ್ಥ. 'ಜೈನ' ಪದದ ಅರ್ಥವೂ ಅಷ್ಟೆ. 'ಜಿನ'ನ ಅನುಯಾಯಿಗಳು ಜೈನರು. ಮತ್ತೆ 'ಜಿನ' ಎಂದರೆ ತನ್ನ ರಾಗ-ದ್ವೇಷ, ಚಿತ್ತ-ವೃತ್ತಿಗಳ ಮೇಲೆ ವಿಜಯ ಸಂಪಾದಿಸಿದವನು. ಬೇರೆ ಶಬ್ದಗಳಲ್ಲಿ ಹೇಳುವುದಾದರೆ- ಇತರರಿಗೆ ತೊಂದರೆಕೊಡುವ ವೃತ್ತಿಯಿಂದ ದೂರವಿರುವವರು, ತಮ್ಮ ಆವಶ್ಯಕತೆಗಳ ಮೇಲೆ ನಿಯಂತ್ರಣವಿರಿಸುವವರು ಮತ್ತು ಇತರರ ದೃಷ್ಟಿಕೋನವನ್ನು ತಿಳಿದುಕೊಳ್ಳುವ ಕ್ಷಮತೆಯುಳ್ಳವರೆಲ್ಲ ಮಹಾವೀರರ ಧರ್ಮಾನುಯಾಯಿಗಳೆಂದೆನಿಸಿಕೊಳ್ಳಲು ಅರ್ಹರೇ. ಈ ಅರ್ಹತೆಯನ್ನು ಸಂಪಾದಿಸಿಕೊಳ್ಳುವಲ್ಲಿ ಯಾವ ಜಾತಿ, ಸಂಪ್ರದಾಯ ಅಥವಾ ಲಿಂಗಭೇದವೂ ಆತಂಕವಾಗಲಾರದು.

ಮಹಾವೀರರ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯರ ಹೊರತಾಗಿ ಅನೇಕ ಬೇಸಾಯಗಾರ ಗೃಹಸ್ಥರು, ಕುಂಬಾರ, ಕಂಬಾರ, ನೇಕಾರ, ತೋಟಗಾರ ಮುಂತಾದ ಕಾರ್ಮಿಕ ವರ್ಗದವರೂ ಭಗವಾನ ಮಹಾವೀರರ ಅನುಯಾಯಿಗಳಾಗಿದ್ದರು. ಅನೇಕ ಜನ ಮ್ಲೇಚ್ಛರನ್ನೂ, ಕಳ್ಳ-ಕಾಕರನ್ನೂ, ಮೀನುಗಾರರನ್ನೂ, ಚಾಂಡಾಲ ಮನೆತನದವರನ್ನೂ, ವೇಶ್ಯೆಯರನ್ನು ಕೂಡ ಅವರು ತಮ್ಮ ಧರ್ಮದಲ್ಲಿ ದೀಕ್ಷಾಬದ್ಧಗೊಳಿಸಿದ್ದರು. ದಕ್ಷಿಣ ಭಾರತದಲ್ಲಿರುವ ಚತುರ್ಥ ಅಥವಾ ಸತ್‌ಶೂದ್ರ ಮತ್ತು ಪಂಚಮರೆನಿಸಿಕೊಳ್ಳುವ ಜೈನರ ಜಾತಿಗಳು ಭಗವಾನ ಮಹಾವೀರರ ಧರ್ಮದ್ವಾರ ಸಕಲರಿಗಾಗಿ ಮುಕ್ತವಾಗಿತ್ತೆಂಬ ಸಂಗತಿಗೆ ಪ್ರಬಲ ಸಾಕ್ಷಿಗಳಾಗಿವೆ.

ಇದರರ್ಥವಿಷ್ಟೆ : ಜೈನ ಕುಲದಲ್ಲಿ ಜನ್ಮವೆತ್ತಿದ ಮಾತ್ರಕ್ಕೆ ಯಾರೂ ಜೈನರೆನಿಸುವುದಿಲ್ಲ. ಭಗವಾನ ಮಹಾವೀರರು ಪ್ರತಿಪಾದಿಸಿದ 'ನಿರ್ಗ್ರಂಥ ಧರ್ಮ'ವನ್ನು ಅನುಸರಿಸುವ ಮತ್ತು ಅಹಿಂಸೆ, ಅನೇಕಾಂತವಾದಗಳ ಸರಿಯಾದ ಅರ್ಥವನ್ನರಿತು ಆಚರಿಸುವ ಯಾರು ಬೇಕಾದರೂ ಜೈನರೆನಿಸಿಕೊಳ್ಳಬಲ್ಲರು.

ಜೈನ ಧರ್ಮದ ಅಹಿಂಸೆ ಒಂದಿಲ್ಲೊಂದು ರೀತಿಯಲ್ಲಿ ಭಾರತೀಯ ನಾಗರಿಕರ ಮೇಲೆ ಪ್ರಭಾವ ಬೀರಿದ್ದುಂಟು. ಆ ಪ್ರಭಾವ ಅವರ ಆಚಾರ-ವಿಚಾರಗಳ ಮೇಲಾಗಿರಬಹುದು; ಅಥವಾ ಚಿಂತನದ ಮೇಲಾಗಿರಬಹುದು. ಪ್ರಾಣಿ ಮಾತ್ರರ ಪ್ರತಿಯಾಗಿ ಅಹಿಂಸಕವೃತ್ತಿ ಮತ್ತು ಸಮಸ್ತ ಪ್ರಾಣಿಗಳ ಪ್ರತಿಯಾಗಿ ಸಮನ್ವಯ ದೃಷ್ಟಿ ಇವು ಜೈನ ಧರ್ಮದ ವೈಶಿಷ್ಟ್ಯಗಳು. ಈ ಉದಾರ ದೃಷ್ಟಿಯಿಂದಾಗಿಯೇ ಜೈನ ಧರ್ಮ ಎಂದಿಗೂ ಭಾರತದಲ್ಲಿ ಸುರಕ್ಷಿತವಾಗಿ ಉಳಿದಿರುವುದು.

ಇಂದು, ಶೋಷಣಾವೃತ್ತಿಯಿಂದ ಮುಕ್ತವಾದ, ಮೇಲು-ಕೀಳೆಂಬ ಭೇದ-ಭಾವವಿಲ್ಲದ ಮತ್ತು ಪ್ರತಿಯೊಬ್ಬರ ವಿಕಾಸಕ್ಕೆ ಯೋಗ್ಯ ಅವಕಾಶಗಳಿರುವಂಥ ಸಮಾಜ ರಚನೆಯ ಕಡೆಗೆ ನಾವು ಗಮನವಿರಿಸಿದ್ದೇವೆ. ಇಂಥ ಸಮಾಜವೊಂದು ಸ್ಥಾಪನೆಯಾದರೇನೇ ನಾವು ಜಗತ್ತಿನಲ್ಲಿ ಸಕಲರೊಡನೆಯೂ ಬೆರೆತು ಬಾಳಬಲ್ಲೆವು; ಪ್ರೀತಿಯಿಂದಿರಬಲ್ಲೆವು. ಭಗವಾನ ಮಹಾವೀರರು ತೋರಿಸಿದ ನಿರ್ಗ್ರಂಥ ಧರ್ಮದ ದಾರಿ ಇಂಥ ಸಮಾಜ ರಚನೆಗೊಂದು ದಿಕ್‌ಸೂಚಿಯೇ ಹೌದು.

Printed at the Central Electric Press, A12/1, Naraina Indl. Area-I, New Delhi-110028